ಕನಕದಾಸರ
500 ನೆಯ ಜಯಂತ್ಯುತ್ಸವದ ನೆನಪಿಗಾಗಿ

# ಜನಪ್ರಿಯ
# ಕನಕ ಸಂಪುಟ



ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
ಕರ್ನಾಟಕ ಸರ್ಕಾರ ಬೆಂಗಳೂರು

ಶ್ರೀ ಕನಕದಾಸರ ಐದುನೂರನೇ ಜಯಂತ್ಯುತ್ಸವದ ನೆನಪಿಗಾಗಿ

# ಜನಪ್ರಿಯ ಕನಕ ಸಂಪುಟ


ಸಂಪಾದಕರು

ದೇ. ಜವರೇಗೌಡ
ಎಲ್. ಎಸ್. ಶೇಷಗಿರಿ ರಾವ್
ದೇವೇಂದ್ರಕುಮಾರ ಹಕಾರಿ
ಎಚ್. ಜೆ. ಲಕ್ಕಪ್ಪಗೌಡ





ಕರ್ನಾಟಕ ಸರಕಾರ

ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
ಬೆಂಗಳೂರು–೫೬೦ ೦೦೨

JANAPRIYA KANAKA SAMPUTA
A Commemoration Volume to mark the 500th Birthday Celebrations of Sri Kanakadasa. Published by the Directorate of Kannada and Culture, Nrupatunga Road, Bangalore-560 002.
Price Rs. 5. Pages 176 + xxiv. 1988.



ಬೆಲೆ : ಐದು ರೂಪಾಯಿ

ಬಿ ಎಂ ಶ್ರೀ ಅಚ್ಚುಕೂಟ, ಕನ್ನಡ ಸಾಹಿತ್ಯ ಪರಿಷತ್ತು
ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ ಬೆಂಗಳೂರು-೫೬೦ ೦೧೮

# ಅರಿಕೆ

ಜನಸಾಮಾನ್ಯರಿಂದ ಮೂಡಿಬಂದು ಅವರ ಬದುಕಿನೊಡನೆ ಜೀವಂತ ಸಂಬಂಧವನ್ನಿರಿಸಿಕೊಂಡೇ ಮಾರ್ಗದರ್ಶಕರಾದ ಅಸಾಮಾನ್ಯ ಸಂತಕವಿ ಕನಕ ದಾಸರು ವ್ಯಕ್ತಿಯಾಗಿಯೂ ಶಕ್ತಿಯಾಗಿಯೂ ಇಡೀ ನಾಡಿನ ಹೃದಯವನ್ನು ಗೆದ್ದವರು. ಅವರ ಐದು ನೂರನೆಯ ಜಯಂತಿಯನ್ನು ಅರ್ಥವತ್ತಾಗಿ ಆಚರಿಸುವುದು ತನ್ನ ಸಂತೋಷದ ಕರ್ತವ್ಯವೆಂದು ಕರ್ನಾಟಕ ಸರ್ಕಾರ ಭಾವಿಸಿದೆ. ಇದಕ್ಕಾಗಿ ಮಾನ್ಯ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ರಾಜ್ಯಮಟ್ಟದ ಸಲಹಾ ಸಮಿತಿಯನ್ನು ಸರ್ಕಾರ ರಚಿಸಿತು. ಸಮಿತಿಯ ಉಪಾಧ್ಯಕ್ಷರಾದ ಮಾನ್ಯ ವಾರ್ತಾ, ಕನ್ನಡ ಮತ್ತು ಸಂಸ್ಕೃತಿ ಸಚಿವರಾದ ಶ್ರೀ ಎಂ. ಪಿ. ಪ್ರಕಾಶ್ ಅವರ ನೇತೃತ್ವದಲ್ಲಿ ಸಮಿತಿ ಕಾರ್ಯನಿರತವಾಯಿತು.

ಶ್ರೀ ಕನಕದಾಸರ ಸಮಗ್ರ ಕೃತಿಗಳು ಕನ್ನಡಿಗರಿಗೆ ಲಭ್ಯವಾಗುವುದು ಅಗತ್ಯ. ಕವಿಮನೋಧರ್ಮ, ಲೋಕಾನುಭವ, ಆಧ್ಯಾತ್ಮಿಕ ಚಿಂತನೆ, ಅನುಭಾವ ಎಲ್ಲ ಸಂಗಮವಾದ ಅವರ ಎಲ್ಲ ರಚನೆಗಳನ್ನು ಪ್ರಕಟಿಸಲು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯವು ಒಂದು ಯೋಜನೆಯನ್ನು ಹಾಕಿಕೊಂಡಿದೆ. ಆದರೆ ದಾಸರ ಆಯ್ದ ಕೃತಿಗಳು ಸುಲಭ ಬೆಲೆಯಲ್ಲಿ ಜನಸಾಮಾನ್ಯಕ್ಕೆ ಲಭ್ಯವಾಗುವುದು ಅಗತ್ಯ ಎಂದು ಮನಗಂಡ ರಾಜ್ಯಮಟ್ಟದ ಸಮಿತಿಯು ಈ ಪ್ರಕಟಣೆಯನ್ನು ಸಿದ್ಧಗೊಳಿಸಲು ನಾಲ್ವರು ವಿದ್ವಾಂಸರ ಸಂಪಾದಕ ಮಂಡಲಿಯನ್ನು ಕೋರಿತು. ಡಾ|| ದೇ. ಜವರೇಗೌಡ, ಪ್ರೊ|| ಎಲ್.ಎಸ್. ಶೇಷಗಿರಿ ರಾವ್, ಪ್ರೊ|| ಹೆಚ್. ಜೆ. ಲಕ್ಕಪ್ಪಗೌಡ, ಡಾ|| ದೇವೇಂದ್ರಕುಮಾರ್ ಹಕಾರಿ ಇವರು ಮಂಡಲಿಯ ಸದಸ್ಯರಾಗಿ 'ಜನಪ್ರಿಯ ಕನಕ ಸಂಪುಟ'ವನ್ನು ಸ್ವಲ್ಪ ಕಾಲದಲ್ಲಿ ಸಿದ್ಧಗೊಳಿಸಿದ್ದಾರೆ. ಅವರಿಗೆ ನನ್ನ ಕೃತಜ್ಞತೆಗಳು. ಸಂಪುಟದ ಕರಡು ಪ್ರತಿಯನ್ನು ಓದಿ ತಿದ್ದಿದ ಪ್ರೊ|| ಎಲ್. ಎಸ್. ಶೇಷಗಿರಿ ರಾವ್‌ರವರ ನೆರವನ್ನು ಸ್ಮರಿಸುತ್ತೇನೆ.

ಈ ಸಂಪುಟವನ್ನು ಕೆಲವೇ ದಿನಗಳಲ್ಲಿ ಅಂದವಾಗಿ ಮುದ್ರಿಸಿಕೊಟ್ಟ ಬಿ.ಎಂ ಶ್ರೀ. ಅಚ್ಚುಕೂಟದವರಿಗೂ ಮತ್ತು ಮುಖಚಿತ್ರವನ್ನು ಸಿದ್ಧಪಡಿಸಿಕೊಟ್ಟ ಶ್ರೀ ರಾ. ಸೂರಿಯವರಿಗೂ ನನ್ನ ಕೃತಜ್ಞತೆಗಳು.

ಸಾಮಾನ್ಯ ಓದುಗರಿಗೂ ಎಟುಕುವ ಬೆಲೆಯಲ್ಲಿ ಶ್ರೀ ಕನಕದಾಸರ ಆಯ್ದ ರಚನೆಗಳನ್ನು ಒಂದು ಸಂಪುಟದಲ್ಲಿ ಪ್ರಕಟಿಸುವುದು ದಾಸರಿಗೂ ಕನ್ನಡಿಗರಿಗೂ ನಾವು ಸಲ್ಲಿಸಬೇಕಾದ ಒಂದು ಸೇವೆ ಎಂದು ಭಾವಿಸಿದ್ದೇನೆ. ಕನ್ನಡ ಜನತೆ ಈ ಪ್ರಕಟಣೆಯ ಸಂಪೂರ್ಣ ಪ್ರಯೋಜನವನ್ನು ಪಡೆದುಕೊಳ್ಳಬೇಕೆಂದು ಪ್ರಾರ್ಥಿಸುತ್ತೇನೆ.

ಐ. ಎಂ. ವಿಠ್ಠಲಮೂರ್ತಿ
ನಿರ್ದೇಶಕರು
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ

ಬೆಂಗಳೂರು
೩೧–೧೦–೧೯೮೮

# ಸಂತ ಕವಿ ಕನಕದಾಸರು

ವರಕವಿಗಳೂ, ಕೀರ್ತನಕಾರರೂ, ಸಂತರೂ ಎನಿಸಿಕೊಂಡ ಕನಕದಾಸರು ಕರ್ನಾಟಕ ಹರಿದಾಸ ಸಾಹಿತ್ಯದ ಅಶ್ವಿನೀದೇವತೆಗಳಲ್ಲೊಬ್ಬರು. ದಾಸ ಸಾಹಿತ್ಯದ ಸುವರ್ಣಯುಗದ ಪ್ರವರ್ತಕರಲ್ಲೊಬ್ಬರಾಗಿ, ಯಾವ ಮತವನ್ನೂ ಬಿಡದೆ, ಯಾವ ಮತಕ್ಕೂ ಅಂಟಿಕೊಳ್ಳದೆ, ಸಕಲ ತತ್ವಗಳನ್ನೂ ವಿಹಾರಿ, ನಿರ್ದಿಗಂತವಾಗಿ ಬೆಳೆದು, ವಿಶ್ವಮಾನವರಾಗಿ ವಿಜೃಂಭಿಸಿದ ಯೋಗ ಪುರುಷರವರು. ದಲಿತ ವರ್ಗಕ್ಕೆ ದಾಖಲೆಗೊಳ್ಳಬಹುದಾದ ಕುರುಬರ ಜಾತಿಯಲ್ಲಿ ಹುಟ್ಟಿದವರಾದರೂ, ಧರ್ಮಕರ್ಮ ಸಂಯೋಗದಿಂದೆಂಬಂತೆ ನಾಯಕತನದ ಪಟ್ಟವಣೆಯನ್ನೇರಿ, ಅರಿಗಳೊಡನೆ ಹೋರಾಡಿ, ಶೌರ್ಯ ಪ್ರತಾಪ ಸಾಹಸಗಳನ್ನು ಮೆರೆದ ವೀರಾಗ್ರಣಿಯವರು ; ಕೊನೆಗೆ ಕುಟುಂಬದಲ್ಲೊದಗಿದ ನಿರಾಶೆಯೋ, ದುರಂತವೋ, ಯುದ್ಧದಲ್ಲಿ ಕಣ್ಣಾರೆ ಕಂಡ ಹೃದಯವಿದ್ರಾವಕವಾದ ಸಾವುನೋವೋ, ಗುರುಗಳ ಕರೆಯೋ, ವಿಶ್ವಶಕ್ತಿಯ ಪ್ರೇರಣೆಯೋ ಕಾರಣವಾಗಿ, ದೊರೆತನವನ್ನು ತೊರೆದು, ಸಂಸಾರವನ್ನು ತ್ಯಜಿಸಿ, ಗುರುಸೇವೆಯಲ್ಲಿ ಕೃತಕೃತ್ಯರಾಗಿ, ಹರಿದಾಸರ ಸಂಸರ್ಗದಿಂದ ಧನ್ಯರಾಗಿ, ಭೇದರಹಿತ ತತ್ತ್ವೋಪಾಸಕರಾಗಿ ಆಧ್ಯಾತ್ಮ ಸಿದ್ಧಿಯ ಶಿಖರವನ್ನೇರಿದ ಮಹಾಯೋಗಿ, ವೈರಾಗ್ಯ ಶಿಖಾಮಣಿಯವರು.

ಧಾರವಾಡ ಜಿಲ್ಲೆಯ ಬಾಡ, ಕನಕದಾಸರು ಜನ್ಮ ತಳೆದ ಊರು. ತಂದೆ ಬೀರಪ್ಪ, ತಾಯಿ ಬಚ್ಚಮ್ಮ. ಅರಿರಾಯರ ಆಕ್ರಮಣದಿಂದ ನಾಡನ್ನು ಸಂರಕ್ಷಿಸುವಲ್ಲಿ ವಿಜಯನಗರ ಸಾಮ್ರಾಜ್ಯಕ್ಕೆ ತನ್ನನ್ನು ತಾನು ಸಮರ್ಪಿಸಿಕೊಂಡಿದ್ದ ನಿಷ್ಠಾವಂತ ಮಾಂಡಲಿಕ ಬೀರಪ್ಪ ; ವಂಶೋದ್ಧಾರಕ ಸುಪುತ್ರನಿಗಾಗಿ ತಿರುಪತಿಯ ತಿಮ್ಮಪ್ಪನಿಗೆ ಹರಕೆ ಹೊತ್ತುಕೊಂಡಿದ್ದ ಸತಿ ಸಾಧ್ವೀಮಣಿ ಬಚ್ಚಮ್ಮ. ಹುಟ್ಟಿದ ಮಗನಿಗೆ ತಿಮ್ಮಪ್ಪನೆಂದೇ ಹೆಸರು. ಕ್ಷತ್ರಿಯೋಚಿತ ವಿದ್ಯೆಗಳನ್ನು ಕಲಿತಿದ್ದ ಅವನ ಎಳೆ ಹೆಗಲ ಮೇಲೆ ತಂದೆ ಸತ್ತ ನಂತರ ಮಾಂಡಲಿಕ ಪದವಿಯ ಭಾರ ಬಿದ್ದರೂ, ವಿಜಯನಗರದ ಸಾಮ್ರಾಟನಿಗೆ ಮೆಚ್ಚಿಗೆಯಾಗುವಂತೆ ಅವನು ತನ್ನ ಕರ್ತವ್ಯಗಳನ್ನು ನಿರ್ವಹಿಸುತ್ತಾನೆ. ಪರಬಲವ ನೋಡಿದರೆ ಸಾಕು, ಅವನು ಉರಿಉರಿದು ಬೀಳುತ್ತಾನೆ. ಅವನು ಅರಿದಳವನ್ನು ಹೊಕ್ಕನೆಂದರೆ ಫೌಜು ಕನಕುಮನಕಾಗುತ್ತದೆ. ದೇಹದ ಖಂಡ ತುಂಡಾಗುವ ತನಕ ಹೋರಾಡುತ್ತಾನೆ. 'ಸ್ವಾರಿ ಹೊರಟರೆ ಛತ್ರ ಭೇರಿಯು ನಗಾರಿಗಳು ಭೋರೆಂಬ ಪೊಂಗಹಳೆ' ಹರಿಯುತ್ತವೆ. ಶ್ರೀಹರಿಯ ಪ್ರಸಾದದಿಂದ ಹುಟ್ಟಿದ ಅವನ ಪ್ರಜ್ಞೆಯಲ್ಲಿ ದೇಹ ವಿದ್ಯೆಯ ಜೊತೆಗೆ

ದೈವೀವಿದ್ಯೆಯೂ ಮೊಳೆದೋರುತ್ತದೆ. ತಿರುಪತಿಗೆ ಮೇಲಿಂದ ಮೇಲೆ ಹೋಗಿ ಬರುತ್ತ ರಾಮಾನುಜ ಪರಂಪರೆಯ ತಾತಾಚಾರ್ಯರ ಪರಿಚಯ ಅವನಿಗಾಗುತ್ತದೆ. ಪರಿಚಯ ಕಾಲಕ್ರಮೇಣ ಗಾಢಭಕ್ತಿಯಾಗಿ ಶರಣ್ಯಭಾವವಾಗಿ ಪರಿಣಮಿಸುತ್ತದೆ. ಅದೇ ಕಾಲದಲ್ಲಿಯೇ ಆಡಳಿತ ವ್ಯವಹಾರಗಳು ಅವನನ್ನು ಆಗಾಗ್ಗೆ ವಿಜಯನಗರಕ್ಕೆ ಕರೆದೊಯ್ಯುತ್ತವೆ. ಅಲ್ಲಿ ಅವನು ರಾಜಗುರು ವ್ಯಾಸರಾಯರ ಮಹಿಮಾಮಯ ವ್ಯಕ್ತಿತ್ವಕ್ಕೆ ಮಾರುಹೋಗುತ್ತಾನೆ. ಬರು ಬರುತ್ತ ಅವನ ರಾಜ್ಯದ ಆರ್ಥಿಕ ಪರಿಸ್ಥಿತಿ ಮೇರುಶಿಖರ ಮುಟ್ಟುತ್ತದೆ. ತಿರುಪತಿಯ ತಿಮ್ಮಪ್ಪನಂತೆ ಬಾಡದ ತಿಮ್ಮಪ್ಪನೂ ಕನಕಪ್ಪನಾಗುತ್ತಾನೆ, ಕನಕನಾಯಕನಾಗುತ್ತಾನೆ. ಲೌಕಿಕ ಸಂಪತ್ತು ಹೆಚ್ಚಿದಷ್ಟೂ ಅವನ ಲಕ್ಷ್ಯ ದೈವೀವೈಭವದ ಕಡೆ ಹೊರಳುತ್ತದೆ. ಬಾಡಕ್ಕಿಂತಲೂ ತನಗೆ ಹೆಚ್ಚು ಪ್ರಿಯವಾದ ಕಾಗಿನೆಲೆಯಲ್ಲಿ ಆದಿಕೇಶವ ಮತ್ತು ನೃಸಿಂಹ ದೇವಾಲಯಗಳನ್ನು ನಿರ್ಮಿಸಿ, ತಿರುಪತಿಯ ಪ್ರತಿಫಲನವನ್ನು ಕಾಣುತ್ತಾನೆ.

ಪಂಪನಂತೆ ಕನಕನಾಯಕ ಕವಿಯೂ ಅಹುದು, ಕಲಿಯೂ ಅಹುದು. ಕಲಿತನ ಕವಿತನಗಳೆರಡೂ ಅವನ ಹುಟ್ಟುಗುಣ. ಸಂತತನವೂ ಅಷ್ಟೇ ಅವನು ಲೌಕಿಕಾಭ್ಯುದಯದ ಶಿಖರವನ್ನೇರುತ್ತಿರುವಾಗಲೇ ಅವನ ಕಾವ್ಯ ಶಕ್ತಿ ಗಿಡದ ಮೊಗ್ಗಿನಂತೆ, ಸ್ವಾತಿಯ ಮುತ್ತಿನಂತೆ ಹೊರಹೊಮ್ಮುತ್ತದೆ. ನೃಸಿಂಹ ದೇವಾಲಯವನ್ನು ನಿರ್ಮಿಸಿ, ವಿಗ್ರಹವನ್ನು ಪ್ರತಿಷ್ಠಾಪಿಸುವ ಸಮಯದಲ್ಲಿಯೇ ನೃಸಿಂಹಸ್ತವ ಉದ್ಭವಗೊಂಡು ಹಾಡುಗಬ್ಬದ ರೂಪದಲ್ಲಿ ದೇವರಿಗೆ ನಿವೇದನೆಗೊಂಡಿರಬೇಕೆಂದು ತೋರುತ್ತದೆ. ಬಂಧನವನ್ನು ತೆಗೆದ ಕೂಡಲೇ ನಿರಂತರವಾಗಿ ತಂತಿಯಲ್ಲಿ ವಿದ್ಯುತ್, ಚಿಲುಮೆಯಲ್ಲಿ ನೀರು ಪ್ರವಹಿಸುವಂತೆ ಅವನ ಕಾವ್ಯಧಾರೆ ಅವಿಚ್ಛಿನ್ನವಾಗಿ ಉಕ್ಕುತ್ತದೆ. ಅವನು ಮೋಹನ ತರಂಗಿಣಿಯನ್ನು ರಚಿಸಿದ್ದು ಸಹ ಆದಿಕೇಶವ ಮೂರ್ತಿಯನ್ನು ಪ್ರತಿಷ್ಠಾಪಿಸಿದ ತರುಣದಲ್ಲಿ. ಆ ಹೊತ್ತಿಗೆ ಅವನಾಗಲೇ ತಾತಾಚಾರ್ಯರನ್ನು ಗುರುವಾಗಿ ಸ್ವೀಕರಿಸಿ, ತನಗೊಪ್ಪಿಗೆಯಾಗಿದ್ದ ರಾಮಾನುಜ ಪಂಥದ ತತ್ವಗಳನ್ನು ಸ್ವೀಕರಿಸಿದ್ದನೆಂದು ತೋರುತ್ತದೆ. ಜೊತೆಗೆ ಜಗತ್ತನ್ನೆಲ್ಲ ಬೆರಗುಗೊಳಿಸಿದ್ದ ವಿಜಯನಗರದ ಕೀರ್ತಿ ಅವನಿಗೆ ಹೆಮ್ಮೆಯ ವಿಷಯವಾಗಿತ್ತು. ದೈವೀ ಸಂಪನ್ಮೂಲದ ಅತ್ಯಾಭ್ಯುದಯ, ಗುರು ವಾತ್ಸಲ್ಯ ಲಾಭ ಮತ್ತು ಸಾಮ್ರಾಜ್ಯ ವೈಭವಗಳ ಸಂಸ್ಫೂರ್ತಿಯಿಂದ ಹೀಲಿಗೆದರಿದ ಅವನ ಪ್ರತಿಭಾ ಮಯೂರದ ಭಾವಾವೇಶ ಸಮೃದ್ಧ ನರ್ತನವನ್ನು ಮೋಹನ ತರಂಗಿಣಿಯಲ್ಲಿ ಕಾಣಬಹುದು. ಇಲ್ಲಿ ಶೃಂಗಾರ ಪ್ರೇಮ ಭಕ್ತಿಗಳು ಪರಸ್ಪರ ಕೈಹಿಡಿದುಕೊಂಡು ಚಲಿಸುತ್ತವೆ. ಮುಕ್ತಿ ಮತ್ತು ಲೌಕಿಕ ಸಾಮ್ರಾಜ್ಯಗಳ ಎಲ್ಲೆ ಒಂದರಲ್ಲೊಂದು ಚಾಚಿಕೊಂಡಿವೆ. ಇದು ಕೃಷ್ಣನಿಗೆತ್ತಿದ ಆರತಿಯಾಗಿದೆ. ಕೃಷ್ಣದೇವರಾಯನಿಗೆ ಸಲ್ಲಿಸಿದ ಗೌರವವೂ ಆಗಿದೆ. ಜತೆಗೆ ದೇಶಪ್ರೇಮದ ಉಕ್ಕಂದವೂ ಆಗಿದೆ. ಇದು

ಕೃತಿಕಾರ ತನ್ನ ಸತಿಗೆ ಹೇಳಿದ ಪ್ರೇಮಕಥೆ. ನಡುನಡುವೆ ಬರುವ ಸತಿಪತಿಯರ ಸಂಭಾಷಣೆಯಿಂದ ಈ ಕೃತಿಯು ಸೊಗಸು ಹೆಚ್ಚಿದೆ. ಇದು ಕೃಷ್ಣರುಕ್ಮಿಣಿಯರ, ಕಂದರ್ಪ ರತಿಯರ, ಅನಿರುದ್ಧ ಉಷೆಯರ ಪ್ರೇಮಕತೆ. ಅಂತೆಯೇ ಕವಿ ಕವಿಪತ್ನಿಯರ ಪ್ರೇಮ ಸಲ್ಲಾಪದ ನಿರೂಪಣೆಯೂ ಅಹುದು. ಆದ್ದರಿಂದ ಇದು ಮೋಹನ ತರಂಗಿಣಿಯಾಗಿದೆ. ಕವಿಸತಿ ಜೀವಂತವಾಗಿದ್ದಾಗ ಈ ಕೃತಿ ರಚನೆ ಮುಗಿದಿರಬೇಕೆಂದು ಊಹಿಸಿದರೆ ತಪ್ಪಾಗಲಾರದು.

ಮೋಹನ ತರಂಗಿಣಿ ಮುಕ್ತಾಯಗೊಳ್ಳುತ್ತಿದ್ದಂತೆ ಅವನ ಮನಸ್ಸು ಐಹಿಕ ಭೋಗ ಸಂಪತ್ತುಗಳಿಂದ ವಿಮುಖಗೊಂಡಂತೆ ತೋರುತ್ತದೆ. ರಾಜ್ಯಾಡಳಿತದಲ್ಲಿ ಅವನ ಆಸಕ್ತಿ ಕುಂದುತ್ತಿದ್ದಂತೆ ಕಾಣುತ್ತದೆ. ರಣರಂಗದಲ್ಲಿ ದೇಹ ಖಂಡತುಂಡವಾದಂಥ ಸಂದರ್ಭದಲ್ಲಿ ತಾನು ಬದುಕಿದ್ದೇ ಪವಾಡವಾಗಿ ಅಲೌಕಿಕ ಮಹೋದ್ದೇಶ ಸಾಧನೆಗಾಗಿ ಶ್ರೀಹರಿಯೇ ತನ್ನನ್ನು ಬದುಕಿಸಿರಬೇಕೆಂದು ತಿಳಿದು, ಅಷ್ಟರಲ್ಲಿ ವ್ಯಾಸರಾಯ ವಾದಿರಾಜರ ಅನುಗ್ರಹವೂ ದೊರೆಯಲಾಗಿ ನಾಯಕರು ವೈರಾಗ್ಯಮನಸ್ಕರಾಗಿ ದಾಸಾಶ್ರಮದ ಕಡೆಗೆ ಗಮನಹರಿಸುತ್ತಾರೆ. ದಾಸವರೇಣ್ಯರೊಡನೆ ಬೆರೆಯಲು ಪ್ರಯತ್ನಿಸುತ್ತಾರೆ. ಆದರೆ ಉತ್ತಮ ವರ್ಗದ ದಾಸರು ಅವರನ್ನು ಕುಲವಿಲ್ಲದ ದಾಸ, ಕುನ್ನಿದಾಸ, ಕುರುಬದಾಸ ಎಂದು ಹಂಗಿಸುತ್ತಾರೆ. ದೊರೆ-ಆಳು, ಚಕ್ರವರ್ತಿ-ಸಾಮಂತ, ಶ್ರೀಮಂತ-ದರಿದ್ರ, ಬ್ರಾಹ್ಮಣ-ಶೂದ್ರ, ಇವೇ ಮೊದಲಾದ ಅಸಮಾನತೆಗಳನ್ನು ತಮ್ಮ ಸುತ್ತಮುತ್ತಣ ಸಮಾಜದಲ್ಲಿ ಕಂಡ ನಾಯಕರು ರಾಮಧಾನ್ಯ ಚರಿತ್ರೆಯಲ್ಲಿ ಎತ್ತಿ ಆಡಿ ಹಂಗಿಸುತ್ತಾರೆ.

ಈ ಅಸಮಾನತೆಗಳೇ ಅವರ ವಿಷಯ ವಿಮುಖತೆಗೆ, ವಿರಕ್ತಿಗೆ ಕಾರಣವಾಗಿರಬೇಕು. ಯುದ್ಧದ ಸಾವುನೋವುಗಳು ಅವರ ಹೃದಯವನ್ನು ಕಲ್ಲಾಗಿಸಿರಬೇಕು. ಮಡದಿಯ ಸಾವು ಅವರ ಭೌತಿಕಾಸಕ್ತಿಗಳಿಗೆ ವಿರಾಮ ಹಾಕಿರಬೇಕು. ಅಧಿಕಾರ ಲಾಂಛನವನ್ನು ತೊರೆದು ಶಂಖದಂಡ ಗೋಪಾಳ ಬುಟ್ಟಿಗಳನ್ನು ಹಿಡಿದು, ವ್ಯಾಸರಾಯರ ಸಾನ್ನಿಧ್ಯದಲ್ಲಿ ಮಧ್ವಮತದ ಸಿದ್ಧಾಂತಗಳನ್ನು ಕರತಲಾಮಲಕಮಾಡಿಕೊಂಡಿರಬೇಕು. ಕನಕ ನಾಯಕರು ಕನಕಪ್ಪನ ದಾಸರಾಗಿರಬೇಕು. ತದನಂತರ ಅವರು ಆಧ್ಯಾತ್ಮ ಸಾಧನೆಗೆ ಹಾಗೂ ಕಾವ್ಯ ಕೃಷಿಗೆ ತಮ್ಮನ್ನು ತಾವು ನಿವೇದಿಸಿಕೊಳ್ಳುತ್ತಾರೆ. ಅವರ ಶುದ್ಧ ಮುಗ್ಧ ಶೃಂಗಾರಪ್ರೇಮ ಹರಿಭಕ್ತಿಯ ವೈಭವೋನ್ನತಿಯಲ್ಲಿ ಸಿದ್ಧಿ ಪಡೆಯುತ್ತದೆ. ಆ ಸಿದ್ಧಿ ಕೀರ್ತನೆಗಳ ರೂಪದಲ್ಲಿ ಹರಿಭಕ್ತಿಸಾರವಾಗಿ ನಳಚರಿತ್ರೆಯಾಗಿ ಮೂರ್ತತ್ವವನ್ನು ಪಡೆಯುತ್ತದೆ.

ಭಾಗವತ ಮನೋಧರ್ಮದ ಕನಕದಾಸರ ಆಧ್ಯಾತ್ಮಯಾತ್ರೆ ಅತ್ಯಪೂರ್ವವಾದದ್ದು, ವಿಶಿಷ್ಟವಾದದ್ದು, ವಿಸ್ಮಯಕಾರಿಯಾದದ್ದು. ದಾಸಪಂಥದ ಸಾಧಕರ ಸಾಧನೆಗಿಂತ ತೀರ ಭಿನ್ನವಾದದ್ದು. ಆದರಿಂದಾಗಿ ಅವರು ಅಪೂರ್ವ ಅದ್ವಿತೀಯ ಸಂತರೆಂಬ ಕೀರ್ತಿಗೆ ಪಾತ್ರರಾಗುತ್ತಾರೆ. ಬಹುದೇವೋಪಾಸನೆ ಚಾಲ್ತಿಯಲ್ಲಿರುವ

ಸಾಧನೆಗಿಂತ ಲಾಂಛನಗಳಿಗೆ ವಿಶೇಷ ಕಿಮ್ಮತ್ತಿರುವ ದೇಶದಲ್ಲಿ ದೇವತೆಗಳಿಂದಾಗಿರುವ ಅನ್ಯಾಯ, ಲಾಂಛನಗಳಿಂದ ಸಂಭವಿಸಿರುವ ಅಪಾಯ ಮಾತಿಗೆ ನಿಲುಕುವಂಥದ್ದಲ್ಲ. ಅಂಥಾಭಿಮಾನಕ್ಕೆ ಅವಕಾಶವಿಲ್ಲದ, ಲಾಂಛನಗಳ ಹೆಸರನ್ನೇ ಕೇಳರಿಯದ ಜಾತಿಯಲ್ಲಿ ಹುಟ್ಟಿದ್ದರಿಂದಲೇ ಅವರು ಪೂರ್ವಗ್ರಹ ದೂರರಾಗಿ ಎಲ್ಲ ಮತಗಳನ್ನು ಎಲ್ಲ ತತ್ವಗಳನ್ನು ಏಕರೀತಿಯಿಂದ ಗೌರವಿಸುತ್ತಾರೆ. ಅವರ ಆಧ್ಯಾತ್ಮ ಯಾತ್ರೆ ಪರಿಶುದ್ಧಾತ್ಮಕವಾಗಿ, ದೋಷದೂರವಾಗಿ, ನಿರಾಣ್ಮನಕ್ಕೊಪ್ಪಿಗೆಯಾಗುವಂತೆ ಸಾಗುತ್ತದೆ. ಆದ್ದರಿಂದಲೇ ಸಮಕಾಲೀನ ದಾಸರಿಗೆ ಸಾಧ್ಯವಾಗದ ನಿರುಪಮ ವಿಶುದ್ಧ ಸಿದ್ಧಿ ಅವರಿಗೆ ವಶವಾಗುತ್ತದೆ.

ಕನಕದಾಸರ ಆಧ್ಯಾತ್ಮಯಾತ್ರೆಯಲ್ಲಿ ನಾಲ್ಕು ಮಜಲುಗಳನ್ನು ಗುರುತಿಸಬಹುದಾಗಿದೆ. ತಮ್ಮ ತಂದೆತಾಯಿಯರ ಭಾಗವತ- ಭಕ್ತಿಯೇ ತಮಗರಿವಿಲ್ಲದಂತೆ ಅವರ ಬಾಲ್ಯ ಜೀವನವನ್ನೆಲ್ಲ ವ್ಯಾಪಿಸಿಕೊಂಡಿರಬೇಕೆಂದು ತೋರುತ್ತದೆ. ತಾಯಿಯ ಹರಕೆಯಿಂದ, ತಿಮ್ಮಪ್ಪನ ವರಪ್ರಸಾದದಿಂದ ತಾವು ಹುಟ್ಟಿರಬೇಕೆಂಬ ಭಾವನೆ ಬಾಲ್ಯದಾರಭ್ಯ ಅವರ ಬದುಕಿನೊಂದಿಗೆ ಬೆಳೆದುಕೊಂಡು ಬಂದಿರಬೇಕೆಂಬುದರಲ್ಲಿ ಸಂದೇಹವಿಲ್ಲ.

ತಾತಾಚಾರ್ಯರ ಮೂಲಕ ಅವರಿಗೆ ಶ್ರೀವೈಷ್ಣವ ಪರಂಪರೆಯ ಪ್ರಭಾವ ದೊರೆತದ್ದೇ ಎರಡನೆಯ ಮಜಲು. ತಮ್ಮ ಚೊಚ್ಚಲು ಕೃತಿ ಮೋಹನ ತರಂಗಿಣಿಯ ಪ್ರಾರಂಭದಲ್ಲಿ ಅವರು ಶ್ರೀ ರಾಮಾನುಜರನ್ನು, ಅವರ ಪರಂಪರೆಯಲ್ಲಿ ಖ್ಯಾತಿಹೊಂದಿದ ತಾತಾಚಾರಿಯರನ್ನು ಅನನ್ಯ ಭಕ್ತಿಯಿಂದ ವಂದಿಸುತ್ತಾರೆ.

ಶ್ರೀಮದ್ಗುರುರಾಯ ದುರಿತ ವಿಚ್ಛೇಯ ದು | ಷ್ಕಾಮ ವಿಚ್ಛೇದನಾಹ್ಲಾದ
ತಾಮಸಗುಣನಾಶ ಸಾತ್ವಿಕೋಲ್ಲಾಸ ಶ್ರೀ | ರಾಮಾನುಜ ಮುನಿಶರಣು ೧–೨

ಈ ರೀತಿಯ ಪೆಂಪುವಡೆದ ಸದ್ಗುರುಕರ | ವಾರಿಜೋದ್ಭವ ಶಿಷ್ಯ ಜನರ
ಪ್ರೇರಿಸಿ ಚತುರ್ವಿಧ ಫಲವೀವ ತಾತಾ | ಚಾರಿಯರಡಿಗೆ ವಂದಿಸುವೆ ೧–೪

ಇವರಲ್ಲದೆ ಮಧ್ವಾಚಾರ್ಯರನ್ನಾಗಲೀ, ಅವರ ಪರಂಪರೆಯ ಶಿಷ್ಯರನ್ನಾಗಲೀ ಕುರಿತ ಸಂಗತಿಗಳು ಈ ಕೃತಿಯಲ್ಲಿ ಸಿಗುವುದಿಲ್ಲ. ಅವರು ಆಗಾಗ್ಗೆ ತಿರುಪತಿಗೆ ಯಾತ್ರೆಗೈಯುತ್ತ, ತಾತಾಚಾರ್ಯರಿಂದ ಶ್ರೀವೈಷ್ಣವ ಮತದ ಸಿದ್ಧಾಂತಗಳನ್ನು ಪರಿಚಯಿಸಿಕೊಂಡಿದ್ದರೂ, ಮೋಹನ ತರಂಗಿಣಿ ಮತೀಯ ಕಾವ್ಯವಾಗಿಲ್ಲವೆನ್ನುವುದು ಸಮಾಧಾನದ ಸಂಗತಿ.

ರಾಜಕಾರ್ಯ ನಿರ್ವಹಣೆಗಾಗಿ ಮೇಲಿಂದ ಮೇಲೆ ವಿಜಯನಗರಕ್ಕೆ ಹೋಗಿ ಬರುತ್ತಿದ್ದ ಅವರು ವ್ಯಾಸರಾಯರ ಪ್ರಭಾವಕ್ಕೊಳಗಾಗುತ್ತಾರೆ. ಇದು ಮೂರನೇ ಮಜಲು. ಸತಿಸುತರನ್ನು ಕಳೆದುಕೊಂಡ ಅವರು ಮಾಂಡಲಿಕ ಪದವಿಯನ್ನು ಸಹ

ತ್ಯಜಿಸಿ, ವೈರಾಗ್ಯ ಲಕ್ಷ್ಮಿಯನ್ನು ವರಿಸಿ, ದಾಸರಂತೆ ಹರಿನಾಮ ಸ್ಮರಣೆಯಲ್ಲಿ ತೊಡಗಿ, ಊರೂರು ತಿರುಗುತ್ತಾರೆ; ಸಾಮಾಜಿಕ ಲೋಪದೋಷಗಳನ್ನು ತಿದ್ದುತ್ತ, ಆತ್ಮ ಶೋಧನೆಯಲ್ಲಿ ಮಗ್ನರಾಗುತ್ತಾರೆ. ಭಗವದ್ಧ್ಯಾನ, ಆತ್ಮಶೋಧ ಮತ್ತು ಆತ್ಮಾರ್ಪಣೆಗಳೇ ಕೀರ್ತನೆಗಳ ರೂಪದಲ್ಲಿ ಅಭಿವ್ಯಕ್ತಗೊಳ್ಳುತ್ತವೆ. ದಾಸ ಸಂಪ್ರದಾಯಕ್ಕನುಸಾರವಾಗಿ ಅವರು ವಾಯುದೇವ ಭೀಮರನ್ನೂ ಮಧ್ವಾಚಾರ್ಯರನ್ನೂ ಭಾವಪರವಶರಾಗಿ ಸ್ತುತಿಸುತ್ತಾರೆ. 'ಪರಮ ಪದವಿಯನೀವ ಗುರು ಮುಖ್ಯ ಪ್ರಾಣನ ಧರೆಯೊಳಗುಳ್ಳ ಮಾನವರೆಲ್ಲ ಭಜಿಸಿರೋ' ಎಂದು ಸಾರುತ್ತಾರೆ. ಜೊತೆ ಜೊತೆಗೆ 'ರಾಮಾನುಜರೇ ನಮೋ ನಮೋ ಸ್ವಾಮಿ ಲಕ್ಷ್ಮಣರೂಪ ನಮೋ ನಮೋ' ಎಂದು ರಾಮಾನುಜರನ್ನು ಸಹ ಕೊಂಡಾಡುತ್ತಾರೆ. ಜನ್ಮದುರಿತ ವಿನಾಶಕ್ಕೆ ದಾಸಾಶ್ರಮವೊಂದೆ ಮದ್ದೆಂದು ಅವಿರತವಾಗಿ ಘೋಷಿಸುತ್ತಾರೆ. 'ದಾಸನಾಗೋ ಭವಪಾಶನೀಗೋ, ವಿಶೇಷನಾಗೋ' ಎನ್ನುತ್ತಾರೆ. 'ದಾಸದಾಸರ ಮನೆಯ ದಾಸಾನುದಾಸ ನಾನು ಶ್ರೀಶಶ್ರೀರಂಗ ನಿಮ್ಮ ಮನೆಯ ದಾಸ' ಎಂದು ತಮ್ಮ ವಿನಯವನ್ನು ಮೆರೆಯುತ್ತಾರೆ.

> ದೇಶಾಧಿಪತಿ ನರಹರಿಯೆ ನಿನ್ನ ಯಪಾದ | ದಾಸರ ದಾಸನೆಂದೆನಿಸಬೇಕೆನ್ನ
> ಮೇಲನರಿತು ವಿಷ್ಣು ಭಕ್ತಿಯ ಮಾಳ್ಪ ಚಂ | ಡಾಲರ ಮನೆಯ ಬಾಗಿಲಕಾಯಿಸೆನ್ನನು

ಹರಿದಾಸನಾಗುವುದಿರಲಿ, ಹರಿದಾಸರ ದಾಸನಾದರೂ ಸಾಕು ಮುಕ್ತಿ ಕೈಗೂಡುವುದೆನ್ನುತ್ತಾರೆ, ಕನಕದಾಸರು.

ಪರಮಾರ್ಥದ ಕಡೆಗೆ ಮನ ತಿರುಗಿದಾಗ ಸಂಸಾರದ ಬಗೆಗಿನ ವ್ಯಾಮೋಹ ನಿರಸನವಾಗುವುದರಲ್ಲಿ ಸಂದೇಹವಿಲ್ಲ. ಸತ್ಯಮಿಥ್ಯಗಳ ಸ್ವರೂಪ ಭಕ್ತನಿಗೆ ಸುಸಂವೇದ್ಯವಾಗುತ್ತದೆ. 'ಏನೂ ಇಲ್ಲದ ಎರಡು ದಿನದ ಸಂಸಾರ' 'ನಂಬಬೇಡಿ ಸಿರಿಯು ತನ್ನದೆ ?' 'ನೆಚ್ಚದಿರು ಸಂಸಾರ ನೆಲೆಯಲ್ಲವೀ ಕಾಯ', 'ಈ ಸಿರಿಯ ನಂಬಿ ಹಿಗ್ಗಲಿ ಬ್ಯಾಡ ಮನವೆ'–ಅನುಭವ ಪಕ್ವವಾದಂತೆಲ್ಲ ಮಾನವನಿಗೆ ಗೋಚರಿಸುವ ಸತ್ಯವಿದು. ಆಪತ್ಕಾಲದಲ್ಲಿ ಯಾರೊಬ್ಬರಿಗೂ ಮತ್ತೊಬ್ಬರಾಗುವುದಿಲ್ಲ, ಮಾನವನ ಉದ್ಧಾರ ಪತನಗಳಿಗೆ ವಿರಾಟಶಕ್ತಿ ಒಂದೇ ಕಾರಣವೆಂಬುದು ದಾಸರ ಕೃತಿಗಳಿಂದ ಸ್ಪಷ್ಟವಾಗುತ್ತದೆ. 'ಆರಿಗೆ ಆರಿಲ್ಲವಯ್ಯ ಆಪತ್ತು ಕಾಲಕೆ' 'ಆರು ಸಮಯಕ್ಕೊದಗಲಿಲ್ಲ, ನೋರಿ ನೋಡುತ ಸುಮ್ಮನಿರುತಿಹರೆಲ್ಲ' 'ಆರು ಹಿತವರು ಎಂದು ನಂಬಬೇಡಾ ಆರಿಗಾರಿಲ್ಲ ಆಪತ್ತು ಬಂದೊದಗಿದೊಡೆ' 'ಆರ ಬಲವಿದ್ದರೇನು ದೈವ ಬಲವಿಲ್ಲದವಗೆ'.

ಸಾಧು ಸನ್ಯಾಸಿ ದಾಸ ಜಂಗಮ ಮುಂತಾದ ವೇಷಗಳ ಮೂಲಕ ಜಗತ್ತಿನಲ್ಲಿ ನಡೆಯುತ್ತಿರುವ ಕಪಟ ವಂಚನೆ ದುರ್ವ್ಯವಹಾರಗಳಿಗೆ ಲೆಕ್ಕವೇ ಇಲ್ಲ. ತಾವೇ ಕಣ್ಣಾರೆ ಕಂಡ ಅಂಥ ದುಷ್ಕೃತ್ಯಗಳನ್ನು ಕನಕದಾಸರು ನಿರ್ದಾಕ್ಷಿಣ್ಯವಾಗಿ

ಖಂಡಿಸುತ್ತಾರೆ. 'ಜಪವ ಮಾಡಿದರೇನು, ತಪವ ಮಾಡಿದರೇನು, ಕಪಟಗುಣ ವಿಪರೀತ ಕಲುಷವಿದ್ದವರು' ಎಂದು ಪ್ರಶ್ನಿಸುತ್ತಾರೆ. 'ನೇಮವಿಲ್ಲದ ಹೋಮ ವೇತಕಯ್ಯಾ' ಎಂದು ಕೇಳುತ್ತಾರೆ. ಇಡೀ ಮನುಕುಲವನ್ನು ಸಮದೃಷ್ಟಿಯಿಂದ ಕಾಣುವ ಕನಕದಾಸರಿಗೆ ಮಹಮದೀಯರಾಗಲೀ, ಲಿಂಗವಂತರಾಗಲೀ ಪರಕೀಯ ರಾಗುವುದಿಲ್ಲ. ಅವರ ಶ್ರೇಯಸ್ಸಿನಲ್ಲಿ ಸಕಲರ ಶ್ರೇಯಸ್ಸು ಅಡಗಿದೆ, ಸಕಲರ ಶ್ರೇಯಸ್ಸಿನಲ್ಲಿ ಅವರ ಶ್ರೇಯಸ್ಸು ತಳುಕುಗೊಂಡಿದೆ ಎಂದು ಪ್ರಾಮಾಣಿಕತೆ ಯಿಂದ ನಂಬಿದ ವಿಶ್ವ ಮಾನವರವರು. ಆದ್ದರಿಂದಲೇ ಆ ಮತಗಳ ಅನುಯಾಯಿ ಗಳೆನ್ನುವ ಡಾಂಭಿಕರೂ ಸಹ ಅವರ ಟೀಕೆಗೊಳಗಾಗುತ್ತಾರೆ.

ಅಲ್ಲ ಖುದಾ ಎಂಬ ಅರ್ಥವನು ಅರಿಯದೆ। ಮುಲ್ಲಾ ಶಾಸ್ತ್ರದ ನೆಲೆಯು ಮುನ್ನರಿಯದೆ
ಕಳ್ಳ ಕೂಗನೆ ಕೂಗಿ ಬೊಗಳಿ ಬಾಯ್ದೆರೆವಂತ। ಕಳ್ಳರಿಗೆ ತಾ ವೀರಸ್ವರ್ಗ ದೊರಕುವುದೆ?
ಲಿಂಗಾಂಗದೊಳಗಿರುವ ಅನುಭವವ ತಿಳಿಯದೆ। ಅಂಗ ಲಿಂಗದ ನೆಲೆಯು ಗುರುತರಿಯದೆ
ಜಂಗಮ ಸ್ಥಾವರದ ಹೊಲಬನರಿಯದ ಇಂಥ | ಭಂಗಿ ಮುಕ್ಕುಗಳೆಲ್ಲ ಲಿಂಗವಂತರಹುದೆ

ಕವಿಯ ಅಂತರ್‌ದೃಷ್ಟಿಯುಳ್ಳ ಕನಕದಾಸರ ಪ್ರಜ್ಞೆಗೆ ನಿಲುಕದ ಲೋಕ ಅಥವಾ ಸಮಾಜಪರವಾದ ವಾಸ್ತವ ಸತ್ಯದರ್ಶನವಿಲ್ಲ. ಅವರ ಕಣ್ಣು ಹಾಯ್ದೆಡೆ ಮನಸ್ಸು ಹರಿದೆಡೆ ಸತ್ಯ ಗೋಚರಿಸುತ್ತದೆ. ಆ ಸತ್ಯ ಅವರ ಅನುಭವದ ಭಾಗ ವಾಗುತ್ತದೆ. ಆ ಅನುಭವ ಸಮುದಾಯವನ್ನು ಒಂದೇ ಒಂದು ವಾಕ್ಯದಲ್ಲಿ ಸರ್ವ ಗ್ರಾಹ್ಯವಾಗುವಂತೆ ಸೂತ್ರೀಕರಿಸುವ ಜಾಣ್ಮೆ ಅವರಿಗೆ ವಶವಾಗಿದೆ. ಹೆಣ್ಣು–ಗಂಡು, ಸಣ್ಣವ–ದೊಡ್ಡವ, ಸಿರಿವಂತ–ಬಡವ, ಕವಿ–ವಿಜ್ಞಾನಿ, ಪ್ರಾಧ್ಯಾಪಕ–ಯಂತ್ರಜ್ಞ, ಸನ್ಯಾಸಿ–ಬಿಕನಾಸಿ, ದೊರೆ–ಪರೆ, ಪುರೋಹಿತ–ಪಾದ್ರಿ ಇವರೇ ಮೊದಲಾದ ಸಕಲ ಮಾನವರು ನಡೆಸುವ ಸದಸತ್ ವ್ಯಾಪಾರಗಳ ಉದ್ದೇಶವೇನೆಂಬುದನ್ನು ದಾಸರು 'ಎಲ್ಲರೂ ಮಾಡುವುದು ಹೊಟ್ಟೆಗಾಗಿ, ಗೇಣು ಬಟ್ಟೆಗಾಗಿ' ಎಂಬ ಒಂದೇ ಒಂದು ಪಲ್ಲವಿಯಲ್ಲಿ ಭಟ್ಟಿ ಇಳಿಸಿದ್ದಾರೆ. ಕ್ರಿಯಾಶೀಲನಲ್ಲದವನ ಬಾಳು ವ್ಯರ್ಥ ಎಂಬ ಅಂಶವನ್ನು 'ಕರ್ಮವಿಲ್ಲದ ಗಂಡು ಕರಿಯ ಒನಕೆಯ ತುಂಡು' ಎಂಬ ಮಾತಿನಲ್ಲಿ ಅಭಿವ್ಯಕ್ತಗೊಳಿಸಿದ್ದಾರೆ. ಸಾವೊಂದು ನಿತ್ಯ ಅನುಭವವಾಗಿ ನಿತ್ಯ ಸತ್ಯವಾಗಿರು ವಾಗ 'ಸತ್ತವರಿಗಳಲೇಕೆ ತನ್ನನು ಹೆತ್ತವರುಗಳು–ಹೊತ್ತವರುಗಳು ಸತ್ತು ಹೋಗುವರಲ್ಲದುಳಿವರೇ' ಎಂದು ಪ್ರಶ್ನಿಸುವ ಮೂಲಕ ಸತ್ಯದ ರಹಸ್ಯವನ್ನು ಅತ್ಯಂತ ಸರಳವಾಗಿ ಮನವರಿಕೆ ಮಾಡಿಕೊಡುತ್ತಾರೆ. ಮನುಷ್ಯ ಜನ್ಮಕ್ಕೆ ಬಂದ ಮೇಲೆ 'ತಾನು ತನ್ನನರಿಯು'ದಿರೆ ಪ್ರೌಢನಾಗಲಾರ ಎಂದು ಅವರು ಲೋಕಕ್ಕೆ ತಿಳಿಸುತ್ತಾರೆ.

ಪ್ರತಿಯೊಂದು ಪರಿಣಾಮಕ್ಕೂ ಕಾರಣ ಕಂಡು ಹಿಡಿಯುವುದು ಮಾನವನ ಹೆಗ್ಗುಣ. ಕಾರಣದ ಸುಳಿವು ಕಾಣದಿದ್ದಾಗ ಅದು ತನ್ನ ಕರ್ಮದ ಫಲವೆನ್ನುವುದು ಸಹಜವೇ. ಪಾಪದ ಲೇಪವಂಟದ ಸಾತ್ವಿಕ ವ್ಯಕ್ತಿಯೊಬ್ಬ ತನಗೆ ಒದಗಿದ ದುಃಖಕ್ಕೆ

ಪ್ರಾರಬ್ಧ ಕರ್ಮವನ್ನು ಹೊಣೆಮಾಡುತ್ತಾನಷ್ಟೆ. ಕರ್ಮದ ರಹಸ್ಯ ಬಹುರೂಪಿಯಾದುದು, ಜಟಿಲವಾದುದು, ಅಗ್ರಾಹ್ಯವಾದದ್ದು; ಅನೇಕ ವೇಳೆ ಅದರ ಬೇರುಗಳು ಅನುಭವಿಗೆ ತಿಳಿಯದಂತೆ ಅವನ ಬದುಕಿನಲ್ಲಿ ಹುದುಗಿಕೊಂಡಿರಬಹುದು; ಅವನ ಆನುವಂಶಿಕತೆಯ ಗರ್ಭದಲ್ಲಿ ಅವಿತುಕೊಂಡಿರಬಹುದು! ಅಥವಾ ಸುತ್ತಮುತ್ತಣ ಸಮಾಜದಲ್ಲಿ ಅಡಗಿಕೊಂಡಿರಬಹುದು. ತನ್ನ ಗ್ರಹಣ ಶಕ್ತಿಗವು ನಿಲುಕದಿದ್ದಾಗ ಅವನ್ನು ಪ್ರಾಚೀನ ಕರ್ಮವೆಂದು ಕರೆಯುತ್ತಾನೆ. ಬುದ್ಧಿಗೆಟುಕದ, ಕಲ್ಪನೆಗೂ ನಿಲುಕದ ವಿಷಯಗಳನ್ನು ಕುರಿತು ಚಿಂತಿಸುವುದೇ ವ್ಯರ್ಥ. ಆದ್ದರಿಂದಲೇ ಕನಕದಾಸರು 'ಪ್ರಾಚೀನ ಕರ್ಮವಿದು ಬಿಡಲರಿಯದು', 'ಯೋಚನೆಯ ಮಾಡಿ ಬಳಲುವುದೇಕೋ ಮನುಜ' ಎಂದು ಚಿಂತನೆಯಲ್ಲಿ ಮುಳುಗಿದವನಿಗೆ ಸಮಾಧಾನ ಹೇಳುತ್ತಾರೆ. ಕಷ್ಟವೋ, ನಷ್ಟವೋ, ರುಜೆಯೋ, ದಾರಿದ್ರ್ಯವೋ ತನ್ನ ಪಾಲಿಗೆ ಬಂದದ್ದನ್ನು ಧೈರ್ಯವಾಗಿ ಎದುರಿಸುವುದರಲ್ಲಿ ಮಾನವನ ಹಿರಿಮೆ ಇದೆ. ಅದನ್ನೇ ಚಿಂತಿಸುತ್ತಾ, ತಲೆಗೆ ಕೈಕಟ್ಟಿಕೊಂಡು ಕುಳಿತರೆ ಅವನಿಗೆ ಇಹಪರಗಳೆರಡೂ ಇಲ್ಲವಾಗುತ್ತವೆ. 'ಒಲ್ಲೆನೆಂದರಾಗುವುದೇ ಅಲ್ಲಿ ಪಡೆದು ಬಂದುದನು; ಎಲ್ಲವನುಂಡು ತೀರಿಸಬೇಕು ಮನವೆ' ತನ್ನೆಲ್ಲಾ ಕಷ್ಟ ನಷ್ಟಗಳಿಗೆ ಅನ್ಯರನ್ನು ಹೊಣೆ ಮಾಡದೆ ರಂಗಯ್ಯನನ್ನು ಸಹ ಬೈಯದೆ ಮನುಷ್ಯ ಆತ್ಮಶಕ್ತಿಯಲ್ಲಿ ಶ್ರದ್ಧೆಯಿಟ್ಟುಕೊಂಡಿರಬೇಕೆನ್ನುವ ಕನಕದಾಸರ ಉಪದೇಶಗಳಲ್ಲಿ ಶಾಶ್ವತ ಸತ್ಯವಿದೆ. 'ತನ್ನ ಪ್ರಾಪ್ತಿಯ ಫಲವ ತಾನರಿಯದೆ ಅನ್ಯರಿಗೆ ಆಡುವುದು ಅವಗುಣವು ಮರುಳೆ' 'ನೀನೇನ ಮಾಡಲಾಪೆ–ರಂಗಯ್ಯ ನಾ ಮುನ್ನ ಮಾಡಿದ ಫಲವಿದೆ ಸಾಕು.'

ಗೊಡ್ಡು ಸಂಪ್ರದಾಯಗಳ ಮಧ್ಯೆ ಬೆಳೆದ ಕನಕದಾಸರು ಅತ್ಯಾಧುನಿಕವೆನ್ನಬಹುದಾದ ವೈಚಾರಿಕ ಮನೋಧರ್ಮವನ್ನು ಮೆರೆದದ್ದು ಆಶ್ಚರ್ಯವೇ ಸರಿ. 'ಅಹುದಾದರಹುದೆನ್ನಿ ಅಲ್ಲವಾದರಲ್ಲವೆನ್ನಿ ಬಹುಜನರು ನೆರೆ ತಿಳಿದು ಪೇಳಿ ಮತ್ತಿದನು' ಎಂಬುದು ಸ್ವತಂತ್ರಮತಿಯ ವಿವೇಕಿ ಹೇಳುವ ಮಾತು. 'ನಾ ಪುತ್ರಸ್ಯ ಗತಿರ್ನಾಸ್ತಿ' ಎನ್ನುವ ನಂಬಿಕೆ ಪ್ರಚಲಿತವಾಗಿದ್ದ ಕಾಲದಲ್ಲಿ 'ತೆಗೆದು ಪ್ರಪಂಚ ವಾಸನೆಯ ಬಿಟ್ಟವರಿಗೆ ಮಗನಿದ್ದರೇನು ಇಲ್ಲದೆ ಹೋದರೇನು ?' ಎಂದು ನಿರ್ಭಿಡೆಯಿಂದ ಹೇಳಬಲ್ಲವರು ಕನಕದಾಸರೊಬ್ಬರೇ. 'ಬಂದಿದೆ ದೂರು ಬರಿದೆ ಪಾಂಡವರಿಗೆ ಕಾದಿ, ಕೊಂದರು ಕೌರವರನೆಂಬ ಅಪಕೀರ್ತಿ' ಎಂದು ನುಡಿದು ಮಹಾಭಾರತದ ಕೆಲವು ಪ್ರಮುಖ ಘಟನೆಗಳನ್ನು ವಿನೂತನ ರೀತಿಯಲ್ಲಿ ವಿವರಿಸಿದ, ಅಲ್ಲಿಯ ಕಗ್ಗಂಟುಗಳನ್ನು ವಿಶಿಷ್ಟ ಮಾಳ್ಕೆಯಲ್ಲಿ ಬಿಡಿಸಿದ ಕೀರ್ತಿ ಅವರಿಗೆ ಮಾತ್ರ ಸಲ್ಲಬೇಕಾಗಿದೆ. 'ನೀನಿರಲು ದೇಹದೊಳು ಹೊಲೆಯುಂಟೆ ?' ಎನ್ನುವ ಎದೆಗಾರಿಕೆ, ವಿಚಾರ ಮತಿ, ಮಹಾನುಭಾವರಿಗೆ ಮಾತ್ರ ಸಾಧ್ಯ.

ದ್ವೈತ ಭಾವದ ಹರಿನಾಮಸ್ಮರಣೆಯಿಂದ ಪ್ರಾರಂಭವಾದ ಕನಕದಾಸರ ಸಾಧನೆ ಭಕ್ತಿ, ಆರ್ತತೆ, ಆತ್ಮಶೋಧನೆ, ಛಲ, ಆತ್ಮೀಯತೆ, ಆತ್ಮ ಸಮರ್ಪಣೆಗಳ

ಮೂಲಕ ಅದ್ವೈತ ಸಿದ್ಧಿಯ ಪರಮ ನೆಲೆಯನ್ನು ಮುಟ್ಟಿದ್ದೇ ನಾಲ್ಕನೆಯ ಮಜಲು. ಶುಕ ವಿಧಾನದ ಸಂಕೀರ್ತನೆಯಲ್ಲಿಯೇ ಅವರು ತೃಪ್ತರಾಗುವುದಿಲ್ಲ. ಶ್ರೀಹರಿಯನ್ನು ಸಾಕ್ಷಾತ್ಕರಿಸಿಕೊಳ್ಳುವ, ಅವನನ್ನು ಎಲ್ಲೆಡೆಯಲ್ಲೂ ಕಾಣುವ, ಸದಾ ಅವನ ಸಂಗಸುಖವನ್ನು ಅನುಭವಿಸುವ ಕಾತರತೆ, ಉದ್ವಿಗ್ನತೆ ಮತ್ತು ತುಡಿತಗಳು ಕ್ಷಣಕ್ಷಣಕ್ಕೂ ಕಾವೇರುತ್ತವೆ. ಶ್ರೀಹರಿಯ ಕೃಪೆಯಿಂದಲ್ಲದೆ ಕಡ್ಡಿಯೂ ಅಲುಗದೆಂಬ ಸತ್ಯವನ್ನವರು ಮನಗಾಣುತ್ತಾರೆ. 'ತಲ್ಲಣಿಸದಿರು ಕಂಡ್ಯ ತಾಳು ಮನವೇ, ಸ್ವಾಮಿ, ನಿಲ್ಲದಲೆ ರಕ್ಷಿಸುವ ಸಂದೇಹ ಬೇಡ' ಆದ್ದರಿಂದ ತಮ್ಮ ಕಷ್ಟ ಸುಖಗಳ, ತಪ್ಪೊಪ್ಪುಗಳ, ಹೊಣೆಗಾರಿಕೆಯನ್ನವರು ಭಗವಂತನಿಗೆ ಅರ್ಪಿಸಿ ನಿರ್ಲಿಪ್ತರಾಗುಳಿಯುತ್ತಾರೆ. 'ತನು ನಿನ್ನದು ಜೀವನ ನಿನ್ನದು ರಂಗಾ, ಅನುದಿನ ದಲಿ ಬಾಹ ಸುಖದುಃಖ ನಿನ್ನದಯ್ಯಾ', ಮನುಷ್ಯನ ಸಕಲ ದೋಷಗಳಿಗೆ ಅಸಂಯಮವೇ ಕಾರಣ. ಆತ್ಮ ಸಂಯಮ, ಚಿತ್ತಶುದ್ಧಿ ಮತ್ತು ಮಡಿ ಬಾಳ್ವೆಗಳು ಮಾತ್ರ ಅವನನ್ನು ದೋಷಗಳಿಂದ ಮುಕ್ತಗೊಳಿಸಿ ಸತ್ಯದತ್ತ ಕೊಂಡೊಯ್ಯುವ ಸಾಧನಗಳು. ಆತ್ಮ ಶೋಧನೆ ಪ್ರತಿಯೊಬ್ಬ ಸಾಧಕ ಕೈಗೊಳ್ಳಬೇಕಾದ ಸಾಧನೆ. ತಪ್ಪುಗಳನ್ನು ಮುಚ್ಚಿಟ್ಟುಕೊಳ್ಳದಿರುವುದೇ ಅವನ ಆತ್ಮಶೋಧನೆಗೆ ನಿದರ್ಶನ. 'ಎಳ್ಳು ಕಾಳಿನಷ್ಟು ಭಕುತಿ ಎನ್ನೊಳಗಿಲ್ಲ; ಮನವೆನ್ನ ಮಾತ ಕೇಳದೊ ಕಾಣೋ ಗೋವಿಂದ' 'ಮರೆದನಭ್ಯುದಯದಲಿ ನಿಮ್ಮನು ಮರೆಯೆನಾಪತ್ತಿನಲಿ', ; 'ನೊಂದೆನಾ ಸತ್ತು ಹುಟ್ಟುವ ಕೋಟಲೆಗಳಿಂದ ನೊಂದೆನಾ ಪಂಚೇಂದ್ರಿಯಂಗಳ ಬಾಧೆ ಗಳಿಂದ ;' 'ಕ್ಷಮಿಸುವುದೆನ್ನ ತಪ್ಪುಗಳ ಸ್ವಾಮಿ' ಇವು ಕನಕದಾಸರ ಅಂತರಂಗದಲ್ಲಿ ಅನುಕ್ಷಣವೂ ಮಿಡಿಯುತ್ತಿರುವ ಭಾವಗಳು.

ಭಗವಂತನಿಗಾಗಿ ಅನುದಿನ ಅಲ್ಪರಿದರೂ, ಅಂಗಲಾಚಿದರೂ ಅವನ ದರ್ಶನ ವೀಯದಿದ್ದಾಗ ಪ್ರಾಮಾಣಿಕ ಭಕ್ತನ ಹೃದಯದಲ್ಲಿ ಸಹಜವಾಗಿಯೇ ಛಲ ತಲೆ ಯೆತ್ತುತ್ತದೆ. ಒಮ್ಮೊಮ್ಮೆ ಭಗವಂತನ ಮೇಲೆ ಅವನು ಉರಿದುಬೀಳುತ್ತಾನೆ. ಅವನ ಮೊರೆ ಪ್ರತಿಭಟನೆಯ ರೂಪವನ್ನು ತಾಳುತ್ತದೆ, 'ನೀನುಪೇಕ್ಷೆಯ ಮಾಡೆ ಬೇರೆ ಗತಿಯಾರೆನಗೆ?' 'ನನ್ನಿಂದ ನಾನೇ ಜನಿಸಿ ಬಂದೆನೆ ದೇವ?' 'ನಿನ್ನ ಪ್ರೇರಣೆಯಿಂದ ನಡೆದು ನುಡಿದ ಮೇಲೆ ನಿನ್ನದು ತಪ್ಪೋ ಎನ್ನದು ತಪ್ಪೋ? ಪರಮಾತ್ಮ?' 'ಹುಟ್ಟಿಸಲು ಬೇಡವಿನ್ನು ಹುಟ್ಟಿಸಿದ್ದಕ್ಕೆ ಪಾಲಿಸಿನ್ನು' 'ಆ ವೇಳೆ ಯಲ್ಲಿ ಆರಾರ ಕಾಯ್ದ್ಯೋ ದೇವ ಈ ವೇಳೆಯಲ್ಲಿ ಎನ್ನ ಕಾಯ್ದರದು ನಿಜ ವಹುದು', 'ಆವ ಸಿರಿಯಲಿ ನೀನು ಎನ್ನ ಮರೆತೆ?' 'ಆರು ಬದುಕಿದರಯ್ಯ ಹರಿ ನಿನ್ನ ನಂಬಿ?' ಈ ವಾಗ್ಬಾಣಗಳಲ್ಲಿ ಅದಮ್ಯ ಕಠೋರ ಭಕ್ತಿಯ ವಾಂಛಲ್ಯವಿದೆ; ಜಗತ್ತಿನಲ್ಲಿ ಹರಿಯೊಬ್ಬನೇ ಸರ್ವಶಕ್ತ, ಅವನೊಬ್ಬನೇ ಸರ್ವವ್ಯಾಪಿ ಎಂಬ, ಅವನೇ ಸರ್ವಕಾರ್ಯ ಕಾರಣನೆಂಬ ದಿವ್ಯದರ್ಶನದ ಪ್ರಭೆ ಇದೆ; ಭಗವತ್ ಸಾಕ್ಷಾತ್ಕಾರಕ್ಕಾಗಿ ಬಹು ದಿನಗಳಿಂದ ತಪಗೈದು ನಿರಾಶೆಯಿಂದ ತಳಮಳಿಸುತ್ತಿರುವ

ಸಾತ್ವಿಕ ಕ್ರೋಧವಿದೆ; ಭಗವಂತನನ್ನು ಪರೀಕ್ಷಿಸುವ ಹಟಯೋಗಿಯ ಭಾವಾತಿಶಯದ ನಿಷ್ಕಪಟ, ನಿರ್ದ್ವಂದ್ವ ಸ್ವಾಭಾವಿಕ ಮನೋಧರ್ಮದ ನೈಷ್ಕರ್ಮ್ಯವಿದೆ. ಕೊನೆಗೆ ಎಲ್ಲೆಲ್ಲಿಯೂ ಇರುವ ಹರಿ ತನ್ನಲ್ಲಿಯೂ ಇದ್ದಾನೆಂಬ ಅರಿವು ಮೊಳೆಯಲನುವಾಗುತ್ತದೆ. ತಮ್ಮನ್ನು ತಾವರಿಯಲು ಪ್ರಯತ್ನಿಸುತ್ತಿದ್ದಂತೆ ಅವರಿಗೆ ಹೃದಯಸ್ಥ ಹರಿಯ ದರ್ಶನವಾಗುತ್ತದೆ. ಆಗ ಆ ಹರಿ ತಂದೆಯಾಗಿ, ಬಂಧುವಾಗಿ, ಮಿತ್ರನಾಗಿ, ಸಕಲವೂ ಆಗಿ ಅವರ ಬದುಕನ್ನೆಲ್ಲ ಆವರಿಸಿಕೊಳ್ಳುತ್ತಾನೆ. 'ಏಕೆ ನೀನಿಲ್ಲಿ ಪವಡಿಸಿದೆ ಜಗದೇಕ ವಿಖ್ಯಾತ ಪಶ್ಚಿಮ ರಂಗಧಾಮ'; 'ನಿನ್ನ ನಾನೇನೆಂದೆನೋ—ರಂಗಯ್ಯ ರಂಗ ನಿನ್ನ·ನಾನೇನೆಂದೆನೋ'; 'ಬಂದೆವಯ್ಯಾ ಗೋವಿಂದಶೆಟ್ಟಿ ಇಂದು ನಿಮ್ಮ ಹರಿವಾಣ ಪ್ರಸಾದವುಂಟೆನಲಾಗಿ'–ಎಂದು ಸಲುಗೆಯಿಂದ ಆತನನ್ನು ದಾಸರು ಸಂಬೋಧಿಸುತ್ತಾರೆ. 'ಇನ್ನೆಷ್ಟು ಕಾಲ ಮೈಮರೆದು ಮಲಗಿದರೆ ನಿನ್ನನೆಬ್ಬಿಸುವರನಾರನು ಕಾಣೆನೋ' ಎನ್ನುವ ಅವರ ಪ್ರವಾದಿ ವಾಣಿಯಲ್ಲಿ ವಿಡಂಬನೆಯಿದೆ; ಸಾಮಾಜಿಕ ಕಳಕಳಿಯಿದೆ; ಇಂದಿಗೆ ಮಾತ್ರವಲ್ಲ ಮುಂದಕ್ಕೂ ಸಲ್ಲುವ ಚಿರಂತನ ಸತ್ಯವಿದೆ.

ಕನಕದಾಸರು ತಾತಾಚಾರ್ಯ, ವ್ಯಾಸರಾಯ ಮತ್ತು ವಾದಿರಾಜರನ್ನು ಗುರುಸ್ಥಾನದಲ್ಲಿಟ್ಟುಕೊಂಡು ಆರಾಧಿಸಿದರೂ ಅವರು ಯಾರಿಂದಲೂ ದೀಕ್ಷೆ ಪಡೆಯಲಿಲ್ಲವೆಂಬುದು ಗಗನವಿಹಾರಿಯಾದ ಅವರ ಸ್ವತಂತ್ರ ವೈನತೇಯ ಪ್ರವೃತ್ತಿಗೆ ಸಾಕ್ಷಿಯಾಗಿದೆ. ಯಾವ ನಿರ್ಬಂಧಕ್ಕೂ ಒಳಗಾಗದೆ, ಯಾವ ಮತದ ಸಿದ್ಧಾಂತಗಳಿಗೂ ಸೆರೆಯಾಗದೆ, ಒಳ್ಳೆಯದೆಲ್ಲಿದ್ದರೂ ಬಿಡದೆ ಎಲ್ಲ ಮತ ತತ್ವಗಳ ಕೂಡಲಸಂಗಮವಾಗಿದ್ದುಕೊಂಡು ಏಕಮೇವಾದ್ವಿತೀಯವಾದ ಸಿದ್ಧಿಯನ್ನು ಪಡೆದ ಸಂತಾಗ್ರಗಣ್ಯರವರು. ಸರ್ವಸಮಾನತೆ, ಸರ್ವಾಭೇದತ್ವ, ಸರ್ವೋದಯ ಅವರ ತಾತ್ವಿಕ ದರ್ಶನದ ಮೂಲಮಂತ್ರಗಳಾಗುತ್ತವೆ. ವೈಷ್ಣವ ಶ್ರೀವೈಷ್ಣವ ಪಂಥಗಳಂತೆಯೇ ಶೈವ ವೀರಶೈವಪಂಥಗಳೂ, ಕೊನೆಗೆ ಖುರಾನ್ ಧರ್ಮವೂ ಅವರಿಗೆ ಆರಾಧನೀಯವಾಗುತ್ತವೆ. ಅವರ ಭಾಗವತ ದೃಷ್ಟಿಯಲ್ಲಿ ಶಿವಕೇಶವರು ಭಿನ್ನರಲ್ಲವೆಂಬುವುದು ಮುಂದಿನ ಕೀರ್ತನೆಯಿಂದ ಸ್ಪಷ್ಟವಾಗುತ್ತದೆ.

ಶಿವ ಶಿವ ಶಿವ ಎನ್ನಿರೋ–ಮೂಜಗದವರೆಲ್ಲ । ಶಿವ ಶಿವ ಶಿವ ಎನ್ನಿರೋ
ಗುರುಲಿಂಗ ಜಂಗಮವ ಅರಿಯಬೇಕಾದರೆ ಶಿವ ಮುಂದೆ । ಪರಮಾತ್ಮನ
ನೀವು ತಿಳಿಯಬೇಕಾದರೆ
ಪೃಥ್ವಿಗೆ ಸದ್ಗುರುವಾಗಬೇಕಾದರೆ (ಶಿವ)–ನೀವು । ತತ್ವಪತಿ ಆದಿಕೇಶವನ
ಕೂಡಬೇಕಾದರೆ (ಶಿವ)
ವಿಸ್ತರಣೆಗೆಯ್ದು ನೋಡುವರೆ ಬ್ರಹ್ಮಾಂಡ ಸ । ಮಸ್ತ ನಿನ್ನೊಳಗಡಗಿಹುದು
ಪ್ರಸ್ತಪಿದೇನು ಕಾರಣಸ್ವಾಮಿ ನೀನೆನ್ನ । ಹಸ್ತಾಬ್ಜದೊಳಗೆ ಮಂಡಿಸಿದೆ;

ಎಂಬುದಾಗಿ ತಾವು ಕಂಡ ಸತ್ಯವನ್ನು ದಾಸರು ಮೋಹನ ತರಂಗಿಣಿಯ ಬಾಣಾಸುರನ ಬಾಯಲ್ಲಿ ಆಡಿಸಿದ್ದಾರೆ. 'ಆರು ಬಲ್ಲರು ಹರಿಹರರ ಮಹಿಮೆಯನು ವಾರಿಜೋದ್ಭವ ಸುರೇಂದ್ರಾದಿಗಳವಲ್ಲ' ಎಂಬ ಪಲ್ಲವಿಯೂ ಹರಿಹರಾಭೇದತ್ವವನ್ನೇ ಶೃತಪಡಿಸುತ್ತದೆ. ಅಲ್ಲಾ ಖುದಾರ ಬಗ್ಗೆಯೂ ಅವರಿಗೆ ಪೂಜ್ಯ ಭಾವನೆ ಇತ್ತೆಂಬುದು ಮತ್ತೊಂದು ಕೀರ್ತನೆಯಲ್ಲಿ ವ್ಯಕ್ತಗೊಂಡಿದೆ. ದುರ್ಗಿ ಚೌಡಿಯರೇ ಮೊದಲಾದ ಕ್ಷುದ್ರ ದೇವತೆಗಳ ಪೂಜೆಯಿಂದ ಮಾನವನಿಗೆ ಆತ್ಮಾನುಸಂಧಾನ ಸಾಧ್ಯವಾಗದೆಂದೂ, ಹರಿಹರಾತ್ಮಕವಾದ ಏಕ ದೇವತಾ ಪೂಜೆಯಿಂದ ಮಾತ್ರ ಆತ್ಮಸಿದ್ಧಿ ಸಾಧ್ಯವೆಂದೂ ತಿಳಿಸಿ, ಸಮಾಜದ ಐಕ್ಯಕ್ಕೆ ಕಂಟಕಕಾರಿಗಳಾಗಿದ್ದ ಸಂಪ್ರದಾಯಗಳನ್ನವರು ಖಂಡಿಸುತ್ತಾರೆ. ವಿಶ್ವಮೂಲ ಕಾರಣವಾದ ಭಗವತ್ ಶಕ್ತಿಯ ಸರ್ವವ್ಯಾಪಕತೆ, ಸರ್ವಾಂತರ್ಯಾಮಿತ್ವ ಹಾಗೂ ಸ್ನೇಹಮುಸ್ಮಿತತೆಗಳು ಸಕಲ ಮತದರ್ಶನಾರಾಧನೆಗಳ ಗುರಿಯಾಗಿವೆಯಷ್ಟೆ. ಯಾವ ಮತವನ್ನೂ ಬಿಡದ, ಎಲ್ಲವನ್ನೂ ಮೀರಿದ ಕನಕದಾಸರಂಥ ಸಂತ ಶ್ರೇಷ್ಠರಿಗೆ ಈ ಮೂರು ಕೇವಲ ವಾಙ್ಮಂತ್ರಗಳಾಗಿರದೆ, ದರ್ಶನಾನುಭವಗಳಾಗಿವೆ. 'ತಾನಾರು ದೇಹವಾರು,ದಿವ್ಯ ಜ್ಞಾನದಲ್ಲಿ ತಿಳಿದಾತ ಪರಮಯೋಗಿ', 'ನಾನು ನೀನು ಎನ್ನದಿರೋ ಹೀನ ಮಾನವ, ಜ್ಞಾನದಿಂದ ನಿನ್ನ ನೀನೇ ತಿಳಿದು ನೋಡೆಲೋ ಪ್ರಾಣಿ'. 'ಇಲ್ಲಿಹನು ಅಲ್ಲಿಲ್ಲವೆಂಬೀ ಸೊಲ್ಲು ಸಲ್ಲದು, ಹೊರಗೊಳಗೆ ನೀನಿಲ್ಲದಿಲ್ಲ' ಇವು ಅವರ ದರ್ಶನಾನುಭವಗಳೇ ಹೊರತು ಕೇವಲ ತಾರ್ಕಿಕ ಸಿದ್ಧಾಂತಗಳಲ್ಲ. 'ನೀ ಮಾಯೆಯೊಳಗೋ, ನಿನ್ನೊಳು ಮಾಯೆಯೋ' ಎನ್ನುವ ಪಲ್ಲವಿಯಿಂದ ಪ್ರಾರಂಭವಾಗುವ ಕೀರ್ತನೆಯಲ್ಲಿ ಕನಕದಾಸರ ಸುದೀರ್ಘ ಚಿಂತನೆಯ ಫಲವಾಗಿ ಮೂರ್ತಸ್ವರೂಪವನ್ನು ಪಡೆದ ತಾತ್ವಿಕ ಸಿದ್ಧಾಂತ ಪ್ರತಿಪಾದನೆಗೊಂಡಿದೆ. ಸಕಲ ಜಗತ್ತುಗಳು ಹರಿಯ ಉದರದೊಳಗೆ ಸೇರಿಕೊಂಡಿರುವಾಗ, 'ಬಯಲು ಆಲಯದೊಳಗೋ, ಆಲಯದೊಳಗೆ ಬಯಲೋ' ಎಂಬ ತರ್ಕವೇ ಅನಾವಶ್ಯಕ. ಹರಿಭಕ್ತಿಸಾರದಲ್ಲಿ ಬರುವ 'ಬೀಜ ವೃಕ್ಷದೊಳಾಯ್ತು, ವೃಕ್ಷಕೆ ಬೀಜವ್ಯಾರಿಂದಾಯ್ತೋ ಲೋಕದಿ ಬೀಜ ವೃಕ್ಷ ನ್ಯಾಯವಿದ ಭೇದಿಸುವರ್‍ಯಾರಿನ್ನು' ಎಂಬ ಪದ್ಯ ಸಹ ಈ ಅರ್ಥವನ್ನೇ ಘೋಷಿಸುತ್ತದೆ. ತಾರತಮ್ಯ ವಿವೇಕವುಳ್ಳ ನಿಜವಾದ ತತ್ವಜ್ಞಾನಿಯ ದೃಷ್ಟಿಗೆ ಮಾಯೆ ದೊಡ್ಡದಲ್ಲ, ಹರಿ ಮಾಯೆಯರು ಭಿನ್ನರಲ್ಲವೆಂಬ ವಿಚಾರ ಗೋಚರಿಸದಿರದು. ಸಮನ್ವಯ, ಸರ್ವೋದಯ ಮತ್ತು ಪೂರ್ಣ ದೃಷ್ಟಿಗಳು ಅವರ ತಾತ್ವಿಕ ಪ್ರಜ್ಞೆಗೆ ಹಾಗೂ ದರ್ಶನಾನುಭವಕ್ಕೆ ಅಧಿಷ್ಠಾನಗಳಾಗಿದ್ದುವೆಂಬುದನ್ನು ಮರೆಯಲಾಗದು. 'ಇಷ್ಟು ದಿನ ಈ ವೈಕುಂಠ ಎಷ್ಟು ದೂರವೋ ಎನ್ನುತಲಿದ್ದೆ' ಎನ್ನುವ ಅವರ ದೃಢ ವಾಣಿಯಿಂದ ಈ ಲೋಕವೇ ವೈಕುಂಠ, ಜನ ಹೃದಯವೇ ವೈಕುಂಠ, ಇಲ್ಲಿದ್ದುಕೊಂಡೇ ಹರಿದರ್ಶನವನ್ನು ಸಾಧಿಸಬಹುದೆಂದು ನಿರ್ಣಯಿಸುತ್ತಾರೆ. ಆಧ್ಯಾತ್ಮ ಸಿದ್ಧಿಯನ್ನು ಸಾಧಿಸಿದ ಆತ್ಮಪ್ರತ್ಯಯ ಹಾಗೂ ಆತ್ಮ ತೃಪ್ತಿಗಳು 'ಬದುಕಿದೆನು ಬದುಕಿದೆನು

ಭವ ಎನಗೆ ಹಿಂಗಿತು | ಪದುಮನಾಭನ ಪಾದದೊಲುಮೆಯೆನಗಾಯ್ತು' ಎಂಬ ಕೀರ್ತನೆಯಲ್ಲಿ ಕೊನೆಗೂ ಅಭಿವ್ಯಕ್ತವಾಗುತ್ತವೆ. ಒಟ್ಟಿನ ಮೇಲೆ ಅವರ ಕೀರ್ತನೆಗಳಲ್ಲಿ ಕಾವ್ಯ ಶಕ್ತಿಯಿದೆ, ಗೇಯತೆಯಿದೆ, ಸಮಾಜ ವಿಮರ್ಶೆಯಿದೆ, ಕಲ್ಪಕತೆಯಿದೆ. ಕಲ್ಪಕತೆ ರೂಪಕತೆಗಳ ಜೊತೆಗೆ ವಿದ್ವತ್ತೂ ಅವರ ಮುಂಡಿಗೆಗಳಲ್ಲಿ ಸಂಕೀರ್ಣಗೊಂಡಿದೆಯೆನ್ನುವುದನ್ನು ಮರೆಯುವಂತಿಲ್ಲ.

ಅವರ ತ್ಯಾಗಮಯ ವೈರಾಗ್ಯ ಜೀವನದ ಪರಮಗುರಿ ಭಗವತ್ಸಾಕ್ಷಾತ್ಕಾರವಾದರೂ, ಲೋಕಕ್ಕೆ ಲೇಸನ್ನೆಸಗುವ ಮಾನವೀಯ ದೃಷ್ಟಿಯಿಂದ ಅವರು ಕೆಲವು ಸಾಮಾಜಿಕ ಪಾಪಗಳನ್ನು ವಿಧಿಯಿಲ್ಲದೆ ಎತ್ತಾಡುತ್ತಾರೆ. ಅವರ ವ್ಯಕ್ತಿತ್ವವನ್ನೇ ಭೀಕರ ಕಂಪನಕ್ಕೆ ಗುರಿಮಾಡಿದ ಕೇಡೆಂದರೆ ಜಾತೀಯತೆ. ನಾನಾ ಜಾತಿಗಳ ಮೇಲಾಟದಿಂದಾಗಿ, ಉತ್ತಮ ವರ್ಗದವರ ಉಪಟಳದಿಂದಾಗಿ ದೇಶದ ಅಸ್ತಿಭಾರವೇ ಅಭದ್ರವಾಗಿತ್ತೆಂಬ, ವಿಧರ್ಮೀಯರ ಆಕ್ರಮಣದಿಂದ ರಾಷ್ಟ್ರಪುರುಷನ ಆತ್ಮೋರ್ಜೆ ಕಂದಿಹೋಗಿತ್ತೆಂಬ, ಸಮಾಜ ಛಿದ್ರವಿಚ್ಛಿದ್ರವಾಗಿತ್ತೆಂಬ, ಬಹುದೇವತೋಪಾಸನೆಯಿಂದಾಗಿ ದೇವಗಣದೊಳಗೆ ಹುರುಡು ಹುಟ್ಟಿ ನಾಸ್ತಿಕತೆ ತಲೆದೋರಿತ್ತೆಂಬ ಸಂಗತಿ ಅವರ ಲೋಕ ಕಲ್ಯಾಣಾಕಾಂಕ್ಷೆಯ ಸಮ್ಯಕ್ ದೃಷ್ಟಿಗೆ ಹೊಳೆಯದಿರಲಿಲ್ಲ. 'ಕುಲ ಕುಲ ಕುಲವೆನ್ನುತಿಹರೋ, ಕುಲವಾವುದು ಸತ್ಯ ಸುಜನರಿಗೆ?' 'ಆತ್ಮನಾವಕುಲ, ಜೀವನಾವಕುಲ?' 'ಕುಲಕುಲಕುಲವೆಂದು ಹೋರಾಡದಿರಿ ನಿಮ್ಮ ಕುಲದ ನೆಲೆಯ ನೇನಾದರೂ ಬಲ್ಲಿರಾ?' ಎಂದವರು ಮೇಲು ಕುಲದವರಿಗೆ ಸವಾಲೆಸೆಯುತ್ತಾರೆ. ಇಂತೆಯೇ ಅವರು ಹಲವಾರು ಸಾಮಾಜಿಕ ಲೋಪದೋಷಗಳನ್ನು ಬಯಲಿಗೆಳೆಯುತ್ತಾರೆ. ಆದರೆ ಮಾಂಡಲಿಕ ಪದವಿಯಲ್ಲಿದ್ದಾಗಲೇ ಅವರು ಅವುಗಳ ಮೂಲೋತ್ಪಾಟನಾ ಕಾರ್ಯದ ಕಡೆಗೆ ಮನಸ್ಸು ಹರಿಸಬೇಕಾಗಿತ್ತು. ಅಂಥ ಮಹಾಪ್ರಯತ್ನದಲ್ಲಿ ಸೋಲನುಭವಿಸಬೇಕಾದ ಪರಿಸ್ಥಿತಿಯೊದಗಿದ್ದರೂ ಚಿಂತಿಸಬೇಕಾದ ಆಗತ್ಯವಿರಲಿಲ್ಲವೆಂದು ಬಸವೋದಾಹರಣೆಯಿಂದ ಸ್ಪಷ್ಟಪಡಿಸಬಹುದಾಗಿದೆ.

ಸಂತ ಕನಕದಾಸರ ಜೀವನದ ಆದ್ಯ ಗುರಿ ಕಾವ್ಯ ಕೃಷಿಯಲ್ಲ, ಆಧ್ಯಾತ್ಮ ಸಾಧನೆ. ಆ ಸಾಧನಾವಸರದಲ್ಲಿ ನಿರಾಯಾಸವಾಗಿ ಸಹಜ ಸುಂದರವಾಗಿ ಆತ್ಮ ಪ್ರೇರಣೆಯಿಂದಲೆಂಬಂತೆ ಮೂಡಿದ ಭಾವಾನಂದ ಆಲೋಚನಾಲಹರಿಗಳು ಕಾವ್ಯ ಶರೀರಿಗಳಾಗಿ ಹೊರ ಬರುತ್ತವೆಂಬುದು ಇಲ್ಲಿ ಗಮನಿಸಬೇಕಾದ ವಿಷಯ. ಅವರು ಅಗ್ರಪಂಕ್ತಿಗೆ ಸೇರಿದ ಕೀರ್ತನಕಾರರು ಮಾತ್ರವಲ್ಲ, ಪ್ರತಿಭಾಸಂಪನ್ನ ಶ್ರೇಷ್ಠ ಕವಿಗಳೂ ಹೌದು. ಕಾವ್ಯ ರಚನೆಯೂ ಅವರ ಆತ್ಮಸಾಕ್ಷಾತ್ಕಾರದ ಸಾಧನವಾಗುತ್ತದೆ ಎಂಬುದನ್ನು ಮರೆಯುವಂತಿಲ್ಲ, ಏಕ ಕಾಲದಲ್ಲಿ ಕೀರ್ತನಕಾರರೂ ಕವಿಗಳೂ ಆದ ದಾಸರೆಂದರೆ ಇವರೊಬ್ಬರೇ. ಅವರ ಕಾವ್ಯಗಳು ಆಧ್ಯಾತ್ಮ ವಿಕಾಸದ ದರ್ಪಣಗಳಾದುವೆಂಬುದೂ ನಿಜ. ತಾವು ಕಲಿತ ವಿದ್ಯೆಯ ಫಲ ತನ್ನವರಿಗೂ ಒದಗಬೇಕು, ಅದರಿಂದ ಸಮಸ್ತ ಜನರಿಗೆ ಲೇಸುಂಟಾಗಬೇಕೆಂಬ ತವಕವೂ ಅವರ ಕಾವ್ಯ

ಕೃಷಿಯ ಹಿನ್ನೆಲೆಯಲ್ಲಿದ್ದಿರಬೇಕು. ಆದ್ದರಿಂದಲೇ ಅವರು ಸಾಮಾನ್ಯರಿಗೂ ಸುಲಭಗಮ್ಯವಾದ ಸಾಹಿತ್ಯ ರೂಪವನ್ನು ತಮ್ಮ ಉದ್ದೇಶಕ್ಕಾಗಿ ಬಳಸಿಕೊಳ್ಳುತ್ತಾರೆ. ಅವರು ರಚಿಸಿದ ಐದು ಕಾವ್ಯಗಳಲ್ಲಿ ಎರಡು ಸಾಂಗತ್ಯದಲ್ಲಿವೆ, ಮೂರು ಭಾಮಿನಿ ಷಟ್ಪದಿಯಲ್ಲಿವೆ. ಕಾವ್ಯ ಕೃಷಿಯ ಪ್ರಾರಂಭದಲ್ಲಿ ಅವರು ಸಾಂಗತ್ಯ ರೂಪದಲ್ಲಿ ರಚಿಸಿದ ನೃಸಿಂಹಸ್ತವದ ಹಸ್ತಪ್ರತಿ ಇನ್ನೂ ಉಪಲಬ್ಧವಾಗಿಲ್ಲ.

ಮುಂಗಾರು ಮಳೆಯಂತೆ ಭೋರ್ಗರೆಯುತ್ತಿದ್ದ ಹರೆಯದಲ್ಲಿ, ಲೌಕಿಕ ವೈಭವದ ಭೋಗ ಜೀವನದಲ್ಲಿ ಮನಸ್ಸು ಮುಳುಗಿದ್ದಾಗ ಪ್ರಾಪಂಚಿಕ ಪಾರಮಾರ್ಥಿಕ ಸಾಧನೆಗಳ ನಡುವೆ ಚಿತ್ತ ಏಳುತಟಗೊಳ್ಳುತ್ತಿದ್ದ ತರುಣದಲ್ಲಿ ಮೋಹನ ತರಂಗಿಣಿ ರಚನೆಗೊಳ್ಳುತ್ತದೆ. ಮೂರು ತಲೆಮಾರುಗಳ ಶೃಂಗಾರ ಕತೆಯಿದು. ಶ್ರೀಕೃಷ್ಣ ಸಂಕಥಾಲಾಪ, ಶ್ರೀಕೃಷ್ಣ ಮಹಿಮಾ ಸ್ತುತಿ ಮತ್ತು ಶೃಂಗಾರ ಭಕ್ತಿಗಳ ಮಹೋನ್ನತಿಗಳ ನಿರೂಪಣೆಯೇ ಈ ಕೃತಿಯ ರಚನೋದ್ದೇಶ. ಶ್ರೀಕೃಷ್ಣ ಕೃಷ್ಣದೇವರಾಯರಲ್ಲಿ ಹಾಗೂ ದ್ವಾರಕಾ ವಿಜಯನಗರಗಳಲ್ಲಿ ಅಭೇದತ್ವವನ್ನು ಕಲ್ಪಿಸುವ ಹವಣು ಸಹ ಇಲ್ಲಿ ನಡೆದಿದೆ. ಸಾಂಪ್ರದಾಯಿಕ ಲಕ್ಷಣಗಳ ದೃಷ್ಟಿಯಿಂದ ಇದೊಂದು ಮಹಾ ಕಾವ್ಯ. ಗಾತ್ರದ ದೃಷ್ಟಿಯಿಂದ ಇದೊಂದು ಬೃಹತ್ ಕಾವ್ಯವೂ ನಿಜ. ಆದರೆ ಅನಾವಶ್ಯಕವಾದ ವರ್ಣನೆಗಳನ್ನು, ಪುನರಾವರ್ತನೆಗಳನ್ನು ಮರೆತದ್ದಾದರೆ ಅದು ಮೇಲ್ಗತೆಯಾಗಿ, ವರಿಷ್ಠ ಕಾವ್ಯವಾಗಿ ಕನ್ನಡ ಸರಸ್ವತಿಯ ಮುಕುಟಮಣಿಯಾಗಿ ರಾರಾಜಿಸತ್ತದೆ.

ಕೃತಿವೇಳ್ದ ಕನಕದಾಸೋತ್ತಮು ಕೇಳ್ದವ । ಅತಿ ಸುಜ್ಞಾನವಧೂಟಿ
ಕೃತಿಗೆಕರ್ತನು ಕಾಗಿನೆಲೆಯಾದಿಕೇಶವ । ಕೃತಿಯ ಕೇಳ್ದರೆ ಪುಣ್ಯವಹುದು
ನೆನೆಯುಲಾತ್ಮದೊಳುದಿಸಿದ ಮಾತ ನಾಲಗೆ । ಕೊನೆಯಲ್ಲಿ ವಿಸ್ತರಗೆಯ್ದು
ಇನಿಯಳೆ ಕೇಳ್ ನಿನ್ನ ಕರ್ಣರಸಾಯನ । ವೆನಲುಸಿರುವೆನೀ ಕೃತಿಯ

ಈ ಕೃತಿಯ ಉದ್ದೇಶ ಸಿದ್ಧಿಗಳೆಲ್ಲ ಈ ಸಾಂಗತ್ಯಗಳಲ್ಲಿ ಉಲ್ಲೇಖಗೊಂಡಿವೆಯೆಂದೇ ಹೇಳಬಹುದು. ಹರಿಹರಾಭೇದತ್ವವನ್ನು ಸ್ಥಾಪಿಸುವ ಮೂಲಕ ಈ ಕೃತಿಯ ಘನತೆ ಹೆಚ್ಚಿದೆಯೆನ್ನಬೇಕು.

ಶ್ರೀರಾಮಚಂದ್ರನ ಚರಿತ್ರೆ, ನರೆದಲಗ(ರಾಗಿ) ವ್ರೀಹಿ (ಭತ್ತ)ಯರ ಜಗಳದ ಕತೆ ಹಾಗೂ ಅದು ಪರಿಹಾರಗೊಂಡ ರೀತಿಯ ನಿರೂಪಣೆ ರಾಮಧಾನ್ಯ (ರಾಗಿ) ಚರಿತ್ರೆಯವಸ್ತು. ಇದರಲ್ಲಿ ಪೌರಾಣಿಕ ಮತ್ತು ಸಾಮಾಜಿಕ ವಸ್ತುಗಳು ರೂಪಕ ವಿಧಾನದಲ್ಲಿ ಓತಪ್ರೋತವಾಗಿ ಹೆಣಿಗೆಗೊಂಡಿವೆ. ಈ ಕಥೆಯ ಪ್ರಮುಖ ಪಾತ್ರಗಳು ಪ್ರಾಣಿಗಳಲ್ಲ, ಧಾನ್ಯಗಳು. ಇದು ಈ ಕೃತಿಯ ವೈಶಿಷ್ಟ್ಯ. ಪ್ರಾಯಶಃ ಜಗತ್ತಿನ ಯಾವ ಸಾಹಿತ್ಯದಲ್ಲಿಯೂ ಧಾನ್ಯಗಳನ್ನು ಕಾವ್ಯಪಾತ್ರಗಳ ಮಟ್ಟಕ್ಕೆ ಏರಿಸಿದ್ದಿಲ್ಲ. ಇದು ವರ್ಗ ಜಾತಿಗಳ ಹೋರಾಟದ ಕತೆಯಾಗಿದ್ದು, ಆ ಕಾಲದ

ಸಾಮಾಜಿಕ ಪರಿಸ್ಥಿತಿಯನ್ನು ಪ್ರತಿಬಿಂಬಿಸುತ್ತದೆ. ತಾನು ಹುಟ್ಟಿದ ಜಾತಿಯೇ ಕಾರಣವಾಗಿ ತಾನನುಭವಿಸಿದ ಮಾನಸಿಕ ಯಾತನೆಗಿಲ್ಲಿ ಅಭಿವ್ಯಕ್ತಿಯ ಇಂಬು ದೊರತಿದೆ. 'ಕನಕದಾಸನ ಮೇಲೆ ದಯಮಾಡಲು ವ್ಯಾಸ ಮುನಿ ಮಠದವರೆಲ್ಲ ದೂರಿಕೊಂಬುವರೋ' ಎಂದ ಪುರಂದರದಾಸರ ಮಾತನ್ನು ಈ ಸಂದರ್ಭದಲ್ಲಿ ನೆನೆಯಬಹುದು. ಇದರಲ್ಲಿ ವಿನೋದ ವಿಡಂಬನೆಗಳಿವೆ. ಗಾಂಭೀರ್ಯ ಘನತೆಗಳೂ ಇವೆ. ಪೌರಾಣಿಕ ಸಾಮಾಜಿಕ ಪ್ರಜ್ಞೆಗಳು ಸಮರಸವಾಗಿ ಬೆರೆತಿರುವ, ಸಮಕಾಲೀನ ಪ್ರಜ್ಞೆಗೆ ವಿಡಂಬನ ವಿಧಾನದಲ್ಲಿ ಪೌರಾಣಿಕ ಮಹತ್ತನ್ನೂಡಿರುವ, ಆ ಮೂಲಕ ಸಮಾಜಾಂತರ್ಗತವಾದ ಕ್ರೂರ ಪಿಡುಗನ್ನು ಬಯಲಿಗೆಳೆದಿರುವ ಈ ಕೃತಿ ಅಣಕು ಮಹಾಕಾವ್ಯವಾಗದೆ?

ನಳಚರಿತ್ರೆ ಕನಕದಾಸರ ಅತ್ಯಂತ ಜನಪ್ರಿಯ ಕೃತಿ. ಕತೆಯ ಚೌಕಟ್ಟು, ಕಣ್ಣಿಗೆ ಕಟ್ಟುವಂಥ ಪಾತ್ರ ರಚನೆ, ವರ್ಣನೆಗಳ ತೊಡಕಿಲ್ಲದ ಭಾರವಿಲ್ಲದ ವಸ್ತು ರಚನೆ, ನೇರವಾಗಿ ಗುರಿಮುಟ್ಟುವ ಶೀಘ್ರಗತಿಯ ಕ್ರಿಯೆ,ಅಲಂಕಾರಗಳ ಭಾರವಿಲ್ಲದ ಸರಳ ಸುಂದರ ಸರಸ ದೇಶೀಶೈಲಿ ಇವುಗಳಿಗಿಂತ ಮಿಗಿಲಾಗಿ ನಳದಮಯಂತಿಯರ ತ್ಯಾಗಮಯ ದೈವೀ ಪ್ರೇಮ–ಈ ಗುಣಗಳಿಂದ ಈ ಕೃತಿ ಸರ್ವಜನಪ್ರಿಯವಾಗಿದೆ. ನಳಚರಿತ್ರೆಯ ಆಧಾರದ ಮೇಲೆ ಅನೇಕ ನಾಟಕ ಕಾವ್ಯ ಮಹಾಕಾವ್ಯಗಳು ರಚನೆ ಗೊಂಡಿದ್ದರೂ ಕನ್ನಡಿಗರಿಗೆ ಸುಪರಿಚಿತವಾಗಿರುವ ನಳಚರಿತ್ರೆ ಇದೊಂದೇ. ನಳ ದಮಯಂತಿಯರಂತೆ ದ್ರೌಪದೀ ಸಮೇತರಾದ ಪಾಂಡವರು ವಾಚಕರ ಅನುಕಂಪಕ್ಕೆ ಪಾತ್ರರಾಗರೆಂಬುದನ್ನಿಲ್ಲಿ ಸ್ಮರಿಸಿಕೊಳ್ಳಬಹುದು. ಕನಕದಾಸರ ಹೆಸರು ಕೇಳದಿ ದ್ದವರೂ ಅವರ ಕೃತಿಯ ಸವಿಯನ್ನನುಭವಿಸಿದ್ದಾರೆಂಬುದೊಂದೇ ಆ ಕೃತಿಯ ಹಾಗೂ ಕೃತಿಕಾರನ ಹಿರಿಮೆಗೆ ಸಾಕ್ಷಿಯಾಗಿದೆ. 'ವನಿತೆ ಮಲಗಿಹಳೋ ಅಧೈರ್ಯದಿ ನೆನವಳೋ;' 'ದೊಡ್ಡ ಹೊಟ್ಟೆಯ ಗೂನು ಬೆನ್ನಿನ ಅಡ್ಡ ಮೋರೆಯ ಗಂಟು ಮೂಗಿನ' ಇವೇ ಮೊದಲಾದ ಭಾಮಿನಿ ಷಟ್ಪದಿಗಳು ಅಬಾಲವೃದ್ಧರ ರಸನಾಗ್ರ ಗಳಲ್ಲಿ ಸದಾ ನರ್ತಿಸುತ್ತವೆಯೆಂಬುದನ್ನು ನೆನೆದಾಗ ಕವಿಯ ಬಗ್ಗೆ ಹೆಮ್ಮೆ ಮೂಡ ದಿರಲಾರದು.

ನಳಚರಿತ್ರೆಯಂತೆಯೇ ಸರ್ವ ಜನಾದರಣೀಯವಾದ ಕನಕದಾಸರ ಮತ್ತೊಂದು ಕೃತಿ ಹರಿಭಕ್ತಿಸಾರ. ಕೆಲವು ಷಟ್ಪದಿಗಳಲ್ಲಿ ಬಳಸಿರುವ ಅಂಕಿತದಿಂದ ಹಾಗೂ ಕೀರ್ತನೆ ಮತ್ತು ಇಲ್ಲಿಯ ಪದ್ಯಗಳಲ್ಲಿ ಕಾಣುವ ಭಾವಾಲೋಚನಾ ಸಾದೃಶ್ಯದಿಂದ ಇದು ಕನಕದಾಸರ ಕೃತಿಯೆಂದು ನಿರ್ಣಯಿಸಬಹುದಾಗಿದೆ. ಹರಿ ಭಕ್ತಿಸಾರದ 'ಗಣನೆಯಿಲ್ಲದ ಜನನಿಯರು ಮೊಲೆಯುಣಿಸಲಾ ಪಯ ಬಿಂದುಗಳನದ ನೆಣಿಸಲಳವೇ ಸಪ್ತ ಸಾಗರಕಧಿಕವೆನಿಸಿಹುದು' ಎಂಬ ಪದ್ಯವನ್ನು 'ಹಲವು ಜನ್ಮದ ತಾಯಿ ಎನಗಿತ್ತ ಮೊಲೆ ಹಾಲು | ನಲಿದು ಉಂಬಾಗ ಹನಿ ನೆಲಕೆ ಬಿದ್ದುದ ಕೂಡಿ ಅಳೆದುನೋಡಿದರೆ ಕ್ಷೀರಾಂಬುಧಿಗೆ ಇಮ್ಮಿಗಿಲು' ಎಂಬ ಕೀರ್ತನೆಯ ಭಾಗವನ್ನು

ಹೋಲಿಸಿನೋಡಿದಾಗ,ಇಂಥ ಹಲವು ಹೋಲಿಕೆಗಳನ್ನು ಗುರುತಿಸಲು ಸಾಧ್ಯವಾಗಿರುವಾಗ ಈ ನಿರ್ಣಯ ಸಾಧುವೆಂದೇ ಸ್ಪಷ್ಟವಾಗುತ್ತದೆ. ಇದು ಅವರ ಕಾವ್ಯ ಜೀವನದ ಅಂತಿಮ ಕೃತಿ. ಹರಿನಾಮ ಸಂಕೀರ್ತನೆ, ಭಕ್ತ ಪರಮಾತ್ಮರ ಸಂಬಂಧ, ಸಾಧಕನ ಆತ್ಮಶೋಧನೆ, ಆರ್ತತೆ, ನಿರಾಶೆ, ಕಳವಳ, ಉದ್ವಿಗ್ನತೆ, ಸಂಶಯ, ಛಲ, ಆತ್ಮ ಸಮರ್ಪಣೆ, ಸಂಸಾರನಿರಸನ, ವೈರಾಗ್ಯ, ವ್ಯಾಕುಲ ಇವೇ ಮೊದಲಾದ ಮಾನಸಿಕ ವ್ಯಾಪಾರಗಳು, ಆತ್ಮಾನುಸಂಧಾನದ ರೀತಿನೀತಿಗಳು ಈ ಶತಕದ ಸಾಮಗ್ರಿಯಾಗುತ್ತದೆ. ರಾಮಾಯಣ ಭಾರತ ಭಾಗವತಗಳ ಸಾರಾಂಶವು ಈ ಪುಟ್ಟ ಕೃತಿಯಲ್ಲಿ ಅಡಕಗೊಂಡಿದೆ. 'ಗಿಳಿಯ ಮರಿಯನು ತಂದು ಪಂಜರದೊಳಗೆ ಪೋಷಿಸಿ,' 'ದೀನ ನಾನು ಸಮಸ್ತಲೋಕಕೆ ದಾನಿ ನೀನು,' 'ಗತಿವಿಹೀನರಿಗಾರು ನೀನೇ ಗತಿ ಕಣಾ' 'ನೀರಮೇಲಣ ಗುಳ್ಳೆಯಂದದಿ ತೋರಿಯಡಗುವ ದೇಹವೀ,' 'ಎಂಜಲೆಂಜಲು ಎಂಬರಾ ನುಡಿ ಎಂಜಲಲ್ಲವೇ,' ಇವುಗಳನ್ನು ಮೇಲಿಂದ ಮೇಲೆ ನೆನೆಯದ ಕನ್ನಡಿಗರಿದ್ದಾರೆಯೇ? ಇವು ನಿರಕ್ಷರಿಗಳ ಬದುಕಿನ ಭಾಗವಾಗಿವೆ ಎಂದರೆ ಅಚ್ಚರಿಯಾಗದಿರದು.

ಹೀಗೆ ಕನ್ನಡಿಗರ ಜೀವನದಲ್ಲಿ ಜೀವಧಾತು ಎಂಬಂತೆ ಸೇರಿಕೊಂಡಿರುವ ಕವಿ ಚಿರಂತನ ಶಕ್ತಿಯ ಪ್ರತಿಮಾ ರೂಪವೆಂದೇ ಹೇಳಬಹುದು. ಕನಕದಾಸರ ನಡೆಯೆಂತು ನೇರವೋ ನುಡಿಯೂ ಅಷ್ಟೇ ನೇರ. ಆದ್ದರಿಂದ ಅವರ ಶೈಲಿ ನಿರಾಭರಣ ಸುಂದರವಾಗುತ್ತದೆ. ಸಾಮಾನ್ಯ ಜನತೆಯನ್ನು ದೃಷ್ಟಿಯಲ್ಲಿಟ್ಟುಕೊಂಡ ಕವಿಯ ಗಹನಾತಿ ಗಹನ ಚಿದ್ವ್ಯಾಪಾರಗಳ ಸಂವಹನಕ್ಕೆ ಆ ಶೈಲಿ ಅನಿವಾರ್ಯವಾಗುತ್ತದೆ. ಉಪಮಾ ರೂಪಕಾದಿ ಕಾವ್ಯಾಲಂಕಾರಗಳಲ್ಲಿಯೂ ಅವರು ಮಾತಾಡಬಲ್ಲರೆಂಬುದಕ್ಕೆ ಅನೇಕ ನಿದರ್ಶನಗಳನ್ನು ನೀಡಬಹುದು. 'ಪಾಪ ಕ್ಷಯಕ್ಕೆಂದು ಗಂಗೆಯೊಳ್ಮಿಂದರೆ | ಪಾಪಿಯ ಮೊಸಳೆ ತಿಂದಂತೆ', 'ಮೂಢರಂದದೊಳು ಗುದ್ದಲಿಯನು | ಕೊಂಡು ನಾಡ ಕಾಲುವೆ ತಿದ್ದುವರೆ?' 'ಹುಲಿಯ ಮೀಸೆಯ ಪಾಶವಿಡಿದು ಗೋವತ್ಸಗಳು ನಲಿದು ಉಯ್ಯಾಲೆಯಾಡಿದಂತೆ', 'ಉದಯಾಸ್ತಮಾನವೆಂಬ ಎರಡು ಕೊಳಗವ ಮಾಡಿ ಆಯುಷ್ಯದ ರಾಶಿಯನು ಅಳೆಯಿರಯ್ಯ'; 'ಒಡಲಿನ ಆಸೆಗಾಗಿ ಜೇನಿನಲ್ಲಿ ತೊಡಕಿ ಬಿದ್ದ ನೊಣದಂತೆ ಬಾಯಬಿಡುವೆ'. 'ನಾವು ಕುರುಬರು ನಮ್ಮ ದೇವರು ಬೀರಯ್ಯ, ಕಾವ ನಮ್ಮಜ್ಜ ನರಗುರಿಯ ಹಿಂಡುಗಳ', 'ಗಂಧಶಾಲಿಯ ಬತ್ತದೊಳಗಿರ್ದ ಕಳೆಯ ಕೀಳ್ವಂದದೆ ಖಳರ ತೀರ್ಕಣಿಸಿ.' ವ್ಯಂಗ್ಯ ವಿಡಂಬನೆಗಳು ಇವರ ಶೈಲಿಯ ಹೆಗ್ಗುಣ. ಅವು ಹಲವು ಸಲ ಪ್ರಶ್ನೆ ರೂಪದಲ್ಲಿ ಹೊರಹೊಮ್ಮುತ್ತವೆ. 'ತೀರ್ಥವನು ಪಿಡಿದವರೆಲ್ಲ ತಿರುನಾಮಧಾರಿಗಳೇ?' 'ಬಾಯಿ ನಾರಿದ ಮೇಲೆ ಏಕಾಂತವೇ?' ಪ್ರಸನ್ನತೆ, ಸಮರಸತೆ, ತಿರುಳುಗನ್ನಡದ ದೇಸಿತನದ ಬೆಡಗುಗಳು ಅವರ ಎಲ್ಲ ಕೃತಿಗಳಲ್ಲೂ ಪರಿಮಳಿಸುತ್ತವೆ. ಅವರ ಶೈಲಿಯ ಮೇಲೆ ಕುಮಾರವ್ಯಾಸನ ಪ್ರಭಾವ ಸಾಕಷ್ಟಾಗಿದೆ. ಕನ್ನಡವನ್ನು ತಮ್ಮ ಚಿತ್ತವೃತ್ತಿ ಕಲ್ಪಕತೆಗಳಿಗನುಗುಣವಾಗಿ

ಮಿಡಿದು, ನಾದಿ, ಮೇಣದಂತೆ ತಿದ್ದಿಕೊಳ್ಳುವ ವಿಶಿಷ್ಟವಾದ ಮೋಡಿ ಕನಕದಾಸರಿಗೊಗ್ಗಿ ಬಂದಿರುವುದಂತು ನಿಜ. ಕವ್ಮುಗೋಲ(ಕಾಮ) ಭಾಷಿಗ(ವಿದ್ಯಾಧಿಪತಿ) ಹೊಕ್ಕುಳ ಹೂವಿನವ(ಕಮಲನಾಭ) ಬಾಯೊಳಗಿಹಳ ಗಂಡ(ಬ್ರಹ್ಮ) ಉತ್ಕಚದ ಬಾಲೆ(ದ್ರೌಪದಿ) ನೀರ ಮಸ್ತಕದಲ್ಲಿ ಧರಿಸಿದನ(ಶಿವ) ವಲವಿಾಕಿ (ವಾಲ್ಮೀಕಿ) ಇಂಥ ಪ್ರಯೋಗಗಳು ನೂರಾರು. ಇವುಗಳಿಂದ ಅವರೆಂಥ ಶಬ್ದ ಗಾರುಡಿಗನೆಂಬುದು ವ್ಯಕ್ತವಾಗುತ್ತದೆ.

ಕವಿ ಸಾಯುತ್ತಾನೆ; ನಿಜಕವಿ ಸಾಯುವುದಿಲ್ಲ. ತನ್ನ ಕೃತಿಗಳ ಮೂಲಕ ಅವನು ಬದಕಿರುತ್ತಾನೆ; ಯಾವ ಕವಿ ಕಂತೆಯನ್ನೊಗೆದನಂತರವೂ ಜನಮನದಲ್ಲಿ ನಿತ್ಯನೂತನವಾಗಿ ದೇದೀಪ್ಯಮಾನನಾಗಿ ರಾರಾಜಿಸುತ್ತಾನೆಯೋ, ಯಾವ ಕವಿಯ ಕೃತಿಗಳು ಶತಶತಮಾನಗಳ ತನಕ ಜನತೆಯ ಬದುಕಿಗೆ ಬೆಳಕಾಗಿ ಜೀವಸತ್ವವಾಗಿ, ಕಾಮಧೇನುವಾಗಿ ಉಳಿಯುತ್ತವೆಯೋ ಅವನೇ ಅಮರ ಕವಿ. ಕನಕದಾಸರು ಅಂಥ ಕವಿಗಳ ಗುಂಪಿಗೆ ಸೇರಿದವರು. ಪುರಂದರ ದಾಸರಿಗೆ ಸಮಕಾಲೀನನೂ ಸ್ವತಂತ್ರ ಕಾಂತಿಯುಳ್ಳವನೂ ಆಗಿ ಕನಕದಾಸನು ಅದೇ ಕಾಲದಲ್ಲಿ ಜೀವಿಸಿದನು ಎಂಬ ರಂ. ಶ್ರೀ. ಮುಗಳಿಯವರ ಅಭಿಪ್ರಾಯ ಉಪಾದೇಯವಾದದ್ದೆ. ಯಾವ ದಾಸರೂ ಅನುಭವಿಸದ ನಿಂದಾವಮಾನ ಕುಹಕಗಳನ್ನು ಕನಕದಾಸರು ಎದುರಿಸ ಬೇಕಾಯಿತೆಂಬ, ಗುರು ವ್ಯಾಸರಾಯರ ವಿವೇಕದಿಂದಾಗಿ ಅವರೊಡ್ಡಿದ ಎಲ್ಲ ಪರೀಕ್ಷೆ ಗಳಲ್ಲಿ ಉತ್ತೀರ್ಣರಾಗಿ, ಅಂದಿನ ಮಾತ್ರವಲ್ಲ, ಎಲ್ಲ ಕಾಲದ ದಾಸರಿಗಿಂತ ಹಾಗೂ ಸಂತ ಶ್ರೇಷ್ಠರಿಗಿಂತ ಅವರು ಉಜ್ವಲರಾಗಿ ಪ್ರಜ್ವಲಿಸಿದರೆಂಬ ಸಂಗತಿ ಎಲ್ಲರ ಹೆಮ್ಮೆಗೆ ಕಾರಣವಾಗಿದೆ. ಕೋಣ ಮಂತ್ರದಿಂದ ಅವರ ಪರೀಕ್ಷೆ ಪ್ರಾರಂಭವಾಗು ತ್ತದೆ. ಕದಳೀ ಪರೀಕ್ಷೆಯಲ್ಲಿ ಗೆದ್ದ ಅವರು ಸುತ್ತಮುತ್ತಣವರ ಉರಿಗಣ್ಣಿಗೆ ಗುರಿ ಯಾಗುತ್ತಾರೆ. ನಾನು ಹೋದರೆ ಹೋಗಬಹುದು ಎಂಬ ಸತ್ಯವನ್ನು ನುಡಿದು, ಗುರುವಿನ ಮುಷ್ಟಿಯಲ್ಲಿ ವಾಸುದೇವನನ್ನು ಗುರುತಿಸಿ ಅವರು ಗುರುಗಳ ಪ್ರಶಂಸೆಗೆ ಪಾತ್ರರಾಗುತ್ತಾರೆ; ಶ್ರೀಕೃಷ್ಣ ಭುವನನೇತ್ರಾಭಿರಾಮನಾಗಿಯೇ ಪ್ರತ್ಯಕ್ಷನಾಗ ಬೇಕಾಗಿಲ್ಲ, ಶುನಕಸರ್ಪಗಳ ರೂಪದಲ್ಲಿಯೂ ಗೋಚರಿಸುತ್ತಾನೆ, ನಿಜವಾದ ಭಕ್ತರಿಗೆ ಮಾತ್ರ ಅವನು ಕಾಣಿಸಿಕೊಳ್ಳುತ್ತಾನೆಂಬ ಸತ್ಯವನ್ನು ಗುರುಗಳಿಗೆಯೆ ಸಾಬೀತು ಮಾಡಿ ತೋರಿಸುತ್ತಾರೆ. ಕೊನೆಗೆ ಉಡುಪಿ ಕೃಷ್ಣನು ತಾವಿದ್ದ ಕಡೆಗೆ ಮುಖತಿರುಗಿಸುತ್ತಾನೆ. ಈ ಸಂಗತಿಗಳೆಲ್ಲ ಪವಾಡ ಸದೃಶವಾಗಿದೆ, ನಿಜ. ಅವರಿಗೆ ಪರಮಾತ್ಮನ ಸಾಕ್ಷಾತ್ಕಾರವಾಗಿತ್ತೆಂಬುದಕ್ಕೆ ಅವರ ಮಹಿಮಾತಿಶಯಕ್ಕೆ ಹಾಗೂ ಅವರ ಭಕ್ತಿ ನಿರ್ಭರತೆಗೊಡ್ಡಿದ್ದ ಪ್ರತಿಮೆಗಳಿವು. ಇವುಗಳಲ್ಲಿ ಕೆಲವಾದರೂ ವಾಸ್ತವ ಸಂಗತಿಗಳಾಗಿರಬೇಕೆಂಬುದರಲ್ಲಿ ಸಂಶಯವಿಲ್ಲ.

ಕನಕದಾಸರು ದಾಸ ಪಂಥದ ಕೀರ್ತನಕಾರರು ಮಾತ್ರವಲ್ಲ. ಎಲ್ಲ ಮತೀಯ ಬಂಧನಗಳಿಂದ ಪಾರಾಗಿ, ಸಾಮಾಜಿಕ ಕಟ್ಟುನಿಟ್ಟುಗಳಿಂದ ಮುಕ್ತರಾಗಿ ಆಧ್ಯಾತ್ಮ ಸಿದ್ಧಿಯ ಶಿಖರವನ್ನೇರಿದ ವಿಶ್ವ ಬಂಧು, ಸಂತ ಕವಿಗಳು.

ಕನಕದಾಸರ ಜಯಂತಿಯ ಸಂದರ್ಭದಲ್ಲಿ ಜನಪ್ರಿಯ ಕನಕಸಂಪುಟವನ್ನು ಪ್ರಕಟಿಸಿ ಅದನ್ನು ಸುಲಭ ಬೆಲೆಗೆ ಮಾರುವ ನಿರ್ಣಯವನ್ನು ತೆಗೆದುಕೊಂಡ ಕರ್ನಾಟಕ ಸರ್ಕಾರ ಹಾಗೂ ಕನಕದಾಸ ಜಯಂತ್ಯುತ್ಸವ ಸಮಿತಿಗಳು ಶ್ಲಾಘನೆ ರ್ಹವಾಗಿವೆ. ಈ ಸಂಪುಟದ ಸಂಪಾದನೆಯಲ್ಲಿ ನೆರವಾದ ಸಂಪಾದಕ ಮಂಡಲಿಗೂ, ಈ ದಿಶೆಯಲ್ಲಿ ಸಾಕಷ್ಟು ಪ್ರೋತ್ಸಾಹ ನೀಡಿದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೂ ವಂದನೆಗಳು ಸಲ್ಲುತ್ತವೆ.

ದೇಜಗೌ

## ಪರಿವಿಡಿ

# ವರವಕೊಡು ಎನಗೆ ವಾಗ್ದೇವಿ

ರಾಗ: ಕಲ್ಯಾಣಿ, ರೂಪಕತಾಳ

ವರವ ಕೊಡು ಎನಗೆ ವಾಗ್ದೇವಿ ನಿಮ್ಮ
ಚರಣ ಕಮಲಗಳ ದಯಮಾಡು ದೇವಿ ‖ ಪಲ್ಲವಿ ‖

ಶಶಿಮುಖದ ನಸುನಗೆಯ ಬಾಲೆ
ಎಸೆವ ಕರ್ಣದ ಮುತ್ತಿನೋಲೆ
ನಸುವ ಸುಪಲ್ಲ ಗುಣಶೀಲೆ | ದೇವಿ
ಬಿಸಜಾಕ್ಷಿ ಎನ್ನ ಹೃದಯದೊಳು ನಿಂದಳೆ ‖ ೧ ‖

ಇಂಪು ಸೊಂಪಿನ ಚಂದ್ರಬಿಂಬೆ
ಕೆಂಪು ತುಟಿಗಳ ನಾಸಿಕದ ರಂಭೆ
ಜೊಂಪು ಮದನ ಸಿಂಗಾಡಿ ಪೂರ್ಣ ಶಕ್ತಿ ಬೊಂಬೆ | ಒಳ್ಳೆ
ಸಂಪಿಗೆ ಮುಡಿಗಿಟ್ಟು ರಾಜಿಪ ಶಾರದಾಂಬೆ ‖ ೨ ‖

ರವಿಕೋಟಿ ತೇಜ ಪ್ರಕಾಶೆ | ಮಹಾ
ಕವಿಜನ ಹೃತ್ಕಮಲ ವಾಸೆ
ಅವಿರಳಪುರಿ ಕಾಗಿನಲೆಯಾದಿ ಕೇ
ಶವನ ಸುತನೀಗೆ ಸನ್ನುತ ರಾಣಿ ವಾಸೆ ‖ ೩ ‖

ಅರ್ಥ : ಶಶಿಮುಖ=ಚಂದ್ರಮುಖ. ನಸುವ=ಸ್ವಲ್ಪವೇ ಕಾಣಿಸಿಕೊಳ್ಳುವ. ಚಂದ್ರಬಿಂಬೆ=ಚಂದ್ರಬಿಂಬದಂಥವಳು. ಬಿಸಜಾಕ್ಷಿ=ಕಮಲದಂಥ ಕಣ್ಣುಳ್ಳವಳು. ನಾಸಿಕ=ಮೂಗು. ಸಿಂಗಾಡಿ=ಬಿಲ್ಲು. ಅವಿರಳಪುರಿ=ದಟ್ಟವಾದ ಪಟ್ಟಣ, ಪ್ರಸಿದ್ಧ ಪಟ್ಟಣ.

ಭಾವ : ವಿದ್ಯಾಭಿಮಾನಿ ದೇವತೆಯಾದ ಶಾರದೆಯನ್ನು ಕವಿ ಕನಕದಾಸರು ವರ್ಣಿಸಿ ಸ್ತುತಿಸುತ್ತಿದ್ದಾರೆ.

# ಶಿವ ಶಿವ ಶಿವ ಎನ್ನಿರೊ

ರಾಗ: ಆರಭಿ, ಆದಿತಾಳ

ಶಿವ ಶಿವ ಶಿವ ಎನ್ನಿರೊ-ಮೂಜಗದವರೆಲ್ಲ
ಶಿವ ಶಿವ ಶಿವ ಎನ್ನಿರೊ. ‖ ಪ ‖

ಆಗಮಸಿದ್ಧಾಂತ ಮೂಲದ ಜಪವಿದು (ಶಿವ)-ನಿಮ್ಮ
ರೋಗದ ಮೂಲವ ಕೆಡಿಪ ಔಷಧವಿದು (ಶಿವ) ‖ ೧ ‖

ಮನುಜ ಜನ್ಮದಿ ಹುಟ್ಟಿ ಮೈಮರೆದಿರಬೇಡಿ (ಶಿವ)-ನಿಮ್ಮ
ತನುಮನ ಪ್ರಾಣವ ವ್ಯರ್ಥವ ಮಾಡದೆ (ಶಿವ) ‖ ೨ ‖

ಅಪರಾಧಕೋಟಿ ತ್ಯಜಿಸಬೇಕಾದರೆ (ಶಿವ)-ಮುಂದೆ
ಉಪಮಿತರೋರ್ವಿತರರರಿಯದ ಜಪವಿದು (ಶಿವ) ‖ ೩ ‖

ಜವನ ಬಾಧೆಯ ನೀವು ಜನಿಸಬೇಕಾದರೆ (ಶಿವ)-ನಿಜ
ಸುವಿಮಲ ಮುಕ್ತಿಯ ಪಡೆಯ ಬೇಕಾದರೆ (ಶಿವ) ‖ ೪ ‖

ಭುವನಕೆ ಬಲ್ಲಿದರಾಗಬೇಕಾದರೆ (ಶಿವ)-ನೀವು
ಭವನ ಪದವಿಯನು ಪಡೆಯಬೇಕಾದರೆ (ಶಿವ) ‖ ೫ ‖

ಗುರುಲಿಂಗ ಜಂಗಮವ ಅರಿಯಬೇಕಾದರೆ (ಶಿವ)-ಮುಂದೆ
ಪರಮಾತ್ಮನ ನೀವು ತಿಳಿಯಬೇಕಾದರೆ (ಶಿವ) ‖ ೬ ‖

ಪೃಥ್ವಿಗೆ ಸದ್ಗುರುವಾಗಬೇಕಾದರೆ (ಶಿವ)-ನೀವು
ತತ್ತ್ವಪತಿ ಆದಿಕೇಶವನ ಕೂಡಬೇಕಾದರೆ (ಶಿವ) ‖ ೭ ‖

**ಅರ್ಥ:** ಆಗಮಸಿದ್ಧಾಂತ=ಜ್ಞಾನ ಶಾಸ್ತ್ರ ತತ್ತ್ವಗಳು. ಉಪಮಿತರ್=ಹೋಲಿಕೆಗೆ ಒಳಪಡುವವರು, ಸಾಮಾನ್ಯರು. ಉರ್ವಿತರ=ಉರ್ವಿತರು (?), ಗರ್ವಿತರು. ಜವ=ಯಮ. ಭುವನ=ಲೋಕ. ಬಲ್ಲಿದರು=ಜ್ಞಾನಿಗಳು. ಪೃಥ್ವಿ=ಭೂಮಿ.

**ಭಾವ:** ಹರಿದಾಸರಾದ ಕನಕದಾಸರು ಶಿವನ ಮಹಿಮೆಯನ್ನು, ಅವನ ಧ್ಯಾನದಿಂದ ದೊರೆಯುವ ಫಲವನ್ನು ಈ ಹಾಡಿನಲ್ಲಿ ವಿವರಿಸಿದ್ದಾರೆ. ಕನಕದಾಸರ ಸರ್ವದೇವ ಸಹಿಷ್ಣುತಾ ದೃಷ್ಟಿಯನ್ನು ಇದು ಬಿಂಬಿಸುತ್ತದೆ.

## ನಮ್ಮಮ್ಮ ಶಾರದೆ

ರಾಗ: ಮೋಹನ, ಅಟತಾಳ

ನಮ್ಮಮ್ಮ ಶಾರದೆ ಉಮಾಮಹೇಶ್ವರಿ
ನಿಮ್ಮೊಳಗಿಹನ್ಯಾರಮ್ಮ ‖ ಪ ‖

ಕಮ್ಮಗೋಲನ ವೈರಿಸುತನಾದ ಸೊಂಡಿಲ
ಹೆಮ್ಮಯ್ಯ ಗಣನಾಥನೆ ‖ ಅ ‖

ಮೋರೆಕಪ್ಪಿನ ಭಾವ ಮೊರದಗಲ ಕಿವಿ
ಕೋರೆದಾಡೆಯವನ್ಯಾರಮ್ಮ
ಮೂರು ಕಣ್ಣಿನ ಸುತ ಮುರಿದಿಟ್ಟ ಚಂದ್ರನ
ಧೀರ ತಾ ಗಣನಾಥನೆ ಅಮ್ಮಯ್ಯ ‖ ೧ ‖

ಉಟ್ಟದಟ್ಟಿಯು ಬಿಗಿದುಟ್ಟ ಚಲ್ಲಣದ
ದಿಟ್ಟ ತಾನಿವನ್ಯಾರಮ್ಮ ಶಿವನ
ಪಟ್ಟದ ರಾಣಿ ಪಾರ್ವತಿಯ ಕುಮಾರ
ಹೊಟ್ಟೆಯ ಗಣನಾಥನೆ ಅಮ್ಮಯ್ಯ ‖ ೨ ‖

ರಾಶಿ ವಿದ್ಯೆಯ ಬಲ್ಲ ರಮಣಿ ಹಂಬಲನೊಲ್ಲ
ಭಾಷಿಗನಿವನ್ಯಾರಮ್ಮ
ಲೇಸಾಗಿ ಸುಜನರ ಸಲಹುವ ನೆಲೆಯಾದಿ
ಕೇಶವನ ದಾಸ ಕಾಣೆ ಅಮ್ಮಯ್ಯ ‖ ೩ ‖

ಅರ್ಥ: ಕಮ್ಮಗೋಲ=ಮನ್ಮಥ. ಕಮ್ಮಗೋಲನ ವೈರಿಸುತ=ಮನ್ಮಥನ ವೈರಿಯಾದ ಶಿವನ ಮಗ, ಗಣಪತಿ. ಹೆಮ್ಮಯ್ಯ=ದೊಡ್ಡ ಅಯ್ಯ. ಭಾವ=ಮುಖಭಾವ ಉಳ್ಳವ. ಮೂರುಕಣ್ಣ=ಶಿವ. ಭಾಷಿಗ=ವಿದ್ಯೆಯ ಅಧಿಪತಿ.

ಭಾವ: ಶಾರದೆಯ ಸ್ತುತಿಯಿಂದ ಆರಂಭವಾದರೂ ಇದು ವಾಸ್ತವವಾಗಿ ಗಣಪತಿಯ ಪ್ರಾರ್ಥನೆ. ಶಾರದೆಯ ಒಳಗೂ ಅಡಗಿರುವವನು, ಕಾಮವೈರಿಯಾದ ಶಿವನ ಕುಮಾರನು, ಗಣಪ. ಗಣಪತಿಯ ಮುಖ, ಕಿವಿ, ಕೋರೆದಾಡೆ, ಅವನ ವಸ್ತ್ರ ವಿಶೇಷ, ವಿದ್ಯಾಸಂಪತ್ತು, ಸ್ತ್ರೀಯರ ಬಗೆಗಿನ ಅನಾಸಕ್ತಿ ಭಾಷಾಸಂಪನ್ನತೆಗಳನ್ನು ಇಲ್ಲಿ ವರ್ಣಿಸಲಾಗಿದೆ.

# ಎನ್ನ ಕಂದ ಹಳ್ಳಿಯ ಹನುಮ

ರಾಗ : ಪಂತುವರಾಳಿ, ತ್ರಿಪುಟತಾಳ

ಎನ್ನ ಕಂದ ಹಳ್ಳಿಯ ಹನುಮಾ
ಚೆನ್ನಾಗಿ ಇಹರೆ ಲಕ್ಷ್ಮಣ ದೇವರು ॥ ಪ ॥

ತುಪ್ಪ ಪಂಚಾಮೃತವಂದು ಅಡವಿಗಡ್ಡೆಗಳಿಂದು
ಕರ್ಪೂರ ವೀಳ್ಯವಂದು ಕರುಕು ಇಂದು
ಸುಪ್ಪತ್ತಿಗೆ ಮಂಚವಂದು ಹುಲ್ಲ ಹಾಸಿಗೆಯಿಂದು
ಶ್ರೀಪತಿ ರಾಘವ ಕ್ಷೇಮದಲ್ಲೈದಾರೆ ॥ ೧ ॥

ನವವಸ್ತ್ರಗಳು ಅಂದು ನಾರಸೀರೆಗಳಿಂದು
ಹೂವಿನ ಗಂಟು ಅಂದು ಜಡೆಗಳಿಂದು
ಜವಾಜಿ ಕತ್ತುರಿಯಂದು ಭಸಿತಧೂಳಿಯಿಂದು
ಶ್ರೀವರ ರಾಘವ ಕ್ಷೇಮದಲ್ಲೈದಾರೆ ॥ ೨ ॥

ಕನಕ ರಥಗಳಂದು ಕಾಲುನಡಿಗೆಯಿಂದು
ಘನಸತ್ತಿಗೆಯಂದು ಬಿಸಿಲು ಇಂದು
ಸನಕಾದಿಗಳೋಲೈಪ ಆದಿಕೇಶವ ನಮ್ಮ
ಹನುಮೇಶ ರಾಘವ ಕ್ಷೇಮದಲ್ಲೈದಾರೆ ॥ ೩ ॥

ಅರ್ಥ : ಕರುಕು=ಸೀದ ಆಹಾರ. ಅಡವಿಗಡ್ಡೆ=ಕಾಡಿನಗಡ್ಡೆ. ಐದಾರೆ=ಇದ್ದಾರೆಯೆ ? ಸತ್ತಿಗೆ=ಛತ್ರಿ.

ಭಾವ : ರಾಮ ಲಕ್ಷ್ಮಣರ ಕ್ಷೇಮ ಸಮಾಚಾರವನ್ನು ಅವರ ಆತ್ಮೀಯ ಬಂಟನಾದ ಹನುಮನ ಮೂಲಕ ವಿಚಾರಿಸುತ್ತಿದ್ದಾರೆ ದಾಸರು. ರಾಮ ಲಕ್ಷ್ಮಣರು ಅರಮನೆಯಲ್ಲಿದ್ದಾಗ ಅನುಭವಿಸುತ್ತಿದ್ದ ಸುಖ ವೈಭವ ಸಂತೋಷಗಳಿಗೂ ಇಂದಿನ ಅರಣ್ಯವಾಸದ ಕಷ್ಟಕಾರ್ಪಣ್ಯಗಳಿಗೂ ಇರುವ ಅಂತರವನ್ನು ವರ್ಣಿಸುವ ಮೂಲಕ ಅವರ ಕರುಣಾಮಯ ಸ್ಥಿತಿಯನ್ನು ಮನಸ್ಸಿಗೆ ತಟ್ಟುವಂತೆ ಮುಂದಿಡುತ್ತಿದ್ದಾರೆ. ರಾಮ ಲಕ್ಷ್ಮಣರ ಕುಶಲವನ್ನು ಕುರಿತು ಸೀತೆ ಹನುಮಂತನನ್ನು ಪ್ರಶ್ನಿಸುತ್ತಿದ್ದಾಳೆ ಎಂದೂ ಭಾವಿಸಬಹುದು.

## ಏನೆಂದಳೇನೆಂದಳೋ

ರಾಗ : ಕಲ್ಯಾಣಿ, ಅಟತಾಳ

ಏನೆಂದಳೇನೆಂದಳೋ ‖ ಪ ‖
ನಿನ್ನೊಳು ಸೀತೆ ಹನುಮಯ್ಯ ‖ ಅ ‖

ಜನಕನ ಮನೆಯಲ್ಲಿ ಜನಿಸಿ ಸುಖದಲ್ಲಿರೆ
ಧನುಸು ಮುರಿದು ತರಲು ಘನ ತನ್ನ ಪದವಿಯ ಬಿಟ್ಟು
ವನವ ಸೇರಿದೆನೆಂದು ಘನ ತಪದಿಂದಲಿ
ವನಿತೆ ಮನದಿನೊಂದು ‖ ೧ ‖

ಕುರುಹಿನುಂಗುರವಾ ತರಳಾಕ್ಷಿಗೆ ಕೊಡೆ
ಬರಿದು ಮಹಾವೆಂದು ಬೇಸರದಿ
ಬೀರಿದಳೇ ಸೀತಾ ಅಶೋಕವನದಿಂದ
ನಿರುತ ಸಂತಾಪದಿಂದಲಿ ಮನದಿ ನೊಂದು ‖ ೨ ‖

ಸೇತುವೆಯ ಕಟ್ಟಿ ರಾವಣನಳಿದು ಸಂ
ಜಾತ ಲಂಕಾಧಿಪನನೋಡಿಸಿ
ಸೀತೆಯು ಸೆರೆಯ ಬಿಡಿಸಿದ್ದೇ ಆದರೆ
ನಾಥಾದಿಕೇಶವಗೆ ಬಲು ಬಿರುದು ಎಂದು ‖ ೩ ‖

ಅರ್ಥ : ಕುರುಹಿನುಂಗುರ=ಗುರುತಿನ ಉಂಗುರ. ನಿರುತ=ಸತತ.

ಭಾವ : ಸೀತೆಯನ್ನು ಹುಡುಕಿ ದರ್ಶನ ಮಾಡಿ ಬಂದ ಹನುಮಂತನನ್ನು ರಾಮ ಪ್ರಶ್ನಿಸುವ ಧಾಟಿಯಲ್ಲಿದೆ ಈ ಹಾಡು. ತಾನು ಶಿವ ಧನಸ್ಸು ಮುರಿದಿದ್ದು, ಜನಕರಾಜನ ಮನೆಯಲ್ಲಿ ಯಾವ ಕಷ್ಟವನ್ನೂ ಕಾಣದೆ ಸುಖದಿಂದ ಇದ್ದ ಸೀತೆಯನ್ನು ತಾನು ಮದುವೆಯಾದದ್ದು, ತನಗೆ ಬರಬೇಕಾಗಿದ್ದ ಅರಸು ಪದವಿಯನ್ನು ಬಿಟ್ಟು ವನ ಸೇರಿದ್ದು, ಮುಂತಾದ ಪ್ರಸಂಗಗಳನ್ನು ರಾಮ ಸ್ಮರಿಸಿಕೊಂಡು, ಗುರುತಿನುಂಗುರ ವನ್ನು ಹನುಮಂತ ನೀಡಿದಾಗ ಆಕೆ ಸಂತಾಪದಿಂದ ನೊಂದು ಬೆಂದು ರಾವಣನನ್ನು ರಾಮ ವಧಿಸಿ ತನ್ನ ಸೆರೆಯನ್ನು ಬಿಡಿಸಿದರೆ ಅವನಿಗೆ ಅಪಾರ ಕೀರ್ತಿ ಬರುತ್ತದೆ ಎಂದು ಸೀತೆ ಹೇಳಿರಬೇಕಲ್ಲವೆ ಎಂದು ಪ್ರಶ್ನಿಸುತ್ತಾನೆ. ತನ್ನ ಸತಿಯ ಬಗೆಗಿನ ಅನುಕಂಪ ಕರುಣೆ ಪ್ರೀತಿಗಳು ಇಲ್ಲಿ ತೀವ್ರವಾಗಿ ವ್ಯಕ್ತವಾಗಿವೆ.

# ಏನೆಂದು ಕೊಂಡಾಡಿ ತುತಿಸಲೋ ದೇವ

ರಾಗ : ಕಲ್ಯಾಣಿ, ಝಂಪೆತಾಳ

ಏನೆಂದು ಕೊಂಡಾಡಿ ತುತಿಸಲೋ ದೇವ
ನಾನೇನು ಬಲ್ಲೆ ನಿನ್ನಯ ಮಹಿಮೆ ಘನವ ॥ ಪ ॥

ಹರಿಮುಕುಂದನು ನೀನು ನರಜನ್ಮ ಹುಳು ನಾನು
ಪರಮಾತ್ಮನು ನೀನು ಪಾಮರನು ನಾನು
ಗರುಡಗಮನನು ನೀನು ಮರುಳುಪಾಪಿಯು ನಾನು
ಪರಂಜ್ಯೋತಿಯು ನೀನು ತಿರುಕನು ನಾನು ॥ ೧ ॥

ವಾರಿಧಿಶಯನನಾದ ಕಾರುಣ್ಯಪತಿ ನೀನು
ಘೋರದಿಂದಿಹ ಕಾಮಿ ಕ್ರೋಧಿ ನಾನು
ಈರೇಳು ಭುವನದೊಳು ಇರುವ ಮೂರುತಿ ನೀನು
ದೂರಿ ನಿಮ್ಮನು ಬೈವ ದುಷ್ಟ ನಾನು ॥ ೨ ॥

ಅಣು ರೇಣು ತೃಣಗಳಲಿ ಪರಿಪೂರ್ಣನು ನೀನು
ಕ್ಷಣ ಕ್ಷಣಕೆ ಅವಗುಣ ಕುಕರ್ಮಿ ನಾನು
ವಾಣಿಯರಸನ ಹೆತ್ತ ವೈಕುಂಠಪತಿ ನೀನು
ತನು ನಿತ್ಯವಲ್ಲದ ಗೊಂಬೆ ನಾನು ॥ ೩ ॥

ಕಂಬದಲಿ ಬಂದ ಆನಂದ ಮೂರುತಿ ನೀನು
ನಂಬಿಕೆಲ್ಲದ ಪ್ರಪಂಚಿಗನು ನಾನು
ಅಂಬರೀಷಗೆ ಒಲಿದ ಅಕ್ರೂರ ಸಖ ನೀನು
ಡಂಭ ಕರ್ಮಿಯು ನಾನು ನಿರ್ಜಿತನು ನೀನು ॥ ೪ ॥

ತಿರುಪತಿಯ ವಾಸ ಶ್ರೀ ವೆಂಕಟೇಶನು ನೀನು
ಸ್ಮರಿಸಿ ನಿಮ್ಮಯ ನಾಮ ಬದುಕುವವ ನಾನು
ಬಿರುದುಳ್ಳವನು ನೀನು ಮೊರೆಹೊಕ್ಕವನು ನಾನು
ಸಿರಿಕಾಗಿನೆಲೆಯಾದಿ ಕೇಶವನು ನೀನು ॥ ೫ ॥

ಅರ್ಥ : ತುತಿಸು=ಸ್ತುತಿಸು. ಪರಂಜ್ಯೋತಿ = ದಿವ್ಯಶಕ್ತಿಯುಳ್ಳವ. ವಾಣಿಯರಸ = ಸರಸ್ವತಿಯ ಗಂಡ, ಬ್ರಹ್ಮ. ಕಂಬದಲಿ ಬಂದ ಆನಂದ ಮೂರುತಿ=ನರಸಿಂಹ. ಡಂಭಕರ್ಮಿ=ನಟನೆ ಮಾಡುವವ. ನಿರ್ಜಿತ=ಗೆಲ್ಲಲುಅಸಾಧ್ಯನಾದವ.

ಭಾವ : ಭಗವಂತನ ಹಿರಿಮೆ ಗರಿಮೆಗಳನ್ನು ಮತ್ತು ತನ್ನ (ಮಾನವನ) ಅವಗುಣ ಅಲ್ಪ ತನಗಳನ್ನು ದಾಸರು ಇಲ್ಲಿ ನಿವೇದಿಸುತ್ತಿದ್ದಾರೆ. ಇದೊಂದು ರೀತಿಯ ನೈಚ್ಯಾನುಸಂಧಾನದ ಭಕ್ತಿಯ ಸ್ವರೂಪ.

# ಈತನೀಗ ವಾಸುದೇವನು

ರಾಗ: ಭೈರವಿ, ರೂಪಕತಾಳ

ಈತನೀಗ ವಾಸುದೇವನು | ಲೋಕದೊಡೆಯ ‖ ಪ ‖
ದಾಸಗೊಲಿದು ತೇರನೇರಿ ತೇಜಿ ಪಿಡಿದು ನಡೆಸಿದಾತ ‖ ಅ ‖

ದನುಜೆಯಾಳ್ದನಣ್ಣನಯ್ಯನ ಪಿತನ ಮುಂದೆ ಕೌರವೇಂದ್ರ
ನನುಜೆಯಾಳಿದವನ ಶಿರವ ಕತ್ತರಿಸುತ
ಅನುಜೆಯಾಳಿದವನ ಬೆಂಕಿ ಮುಟ್ಟದಂತೆ ಕಾಯ್ದ ರುಕ್ಮ
ನನುಜೆಯಾಳಿದವನ ಮೂರ್ತಿಯನ್ನು ನೋಡಿರೋ ‖ ೧ ‖

ನರನ ಸುತನರಣ್ಯದಲ್ಲಿ ಗಿರಿಯೊಳ್ನಿಂತು ತನ್ನ ರೋಷದಿ
ಶರಗಳನ್ನು ತೀಟುತಿಪ್ಪನ ಯೋಚಿಸಿ
ಭರದಲವನ ಕರೆದು ಕುರುಪು ತೋರಿ ಪತ್ರವನ್ನು ಹಾರಿಸಿದವನ
ಶಿರವನ್ನು ಛೇದಿಸಿದ ದೇವ ಕಾಣಿರೋ ‖ ೨ ‖

ಸೃಷ್ಟಿಕರ್ತಗೆ ಮಗನಾದವನಿಗಿಷ್ಟ ಭೂಷಣ ಅಶನವಾದನ
ಜ್ಯೇಷ್ಠಪುತ್ರಗೆ ವೈರಿ ತೊಡೆಯ ಛೇದಿಸೆಂದು ಬೋಧಿಸಿ
ಕಷ್ಟವನ್ನು ಕಳೆದು ಭಕ್ತರಿಪ್ಪವನ್ನು ಕಾದು ಉ
ತ್ಕೃಷ್ಟ ಮಹಿಮನಾದ ದೇವ ಕಾಣಿರೋ ‖ ೩ ‖

ಕ್ರೂರನಾದ ಫಣಿಪ ಬಾಣ ತರಣಿಜನು ನಿರೀಕ್ಷಿಸ್ಯಾಗ
ವೀರನೆಚ್ಚ ಯೆಸುಗೆ ಬಪ್ಪುದನ್ನು ಈಕ್ಷಿಸಿ
ಧಾರಿಣಿಯ ಪದದೊಳೌಕಿ ಚರಣಭಜಕ ನರನ ಕಾಯ್ದ
ಭಾರಕರ್ತನಾದ ದೇವನೀತ ಕಾಣಿರೋ ‖ ೪ ‖

ವ್ಯೋಮ ಕೇಶನಿಪ್ಪದೆಸೆಯ ಆ ಮಹಾಮಹಿಮೆಯುಳ್ಳ
ಸಾಮಜವನೇರಿ ಬರುವ ಶಕ್ತಿಯನೀಕ್ಷಿಸಿ
ಪ್ರೇಮದಿಂದ ಉರವನೊಡ್ಡಿ ಡಿಂಗರಿಗನ ಕಾಯ್ದ ಸಾರ್ವ
ಭೌಮ ಬಾಡದಾದಿ ಕೇಶವನ್ನ ನೋಡಿರೋ ‖ ೫ ‖

ಅರ್ಥ: ತೇಜಿ=ಕುದುರೆ. ದನುಜೆ=ರಾಕ್ಷಸಿ, ಹಿಡಿಂಬೆ. ಅನುಜೆ=ತಂಗಿ. ತೀಟು=ಉಜ್ಜು. ಸೃಷ್ಟಿಕರ್ತಗೆಮಗ=ಶಿವನ ಮಗ, ಗಣಪತಿ. ಇಷ್ಟಭೂಷಣ=ಇಷ್ಟವಾದ ಒಡವೆ,

ಸರ್ಪ. ಅಶನ=ಆಹಾರ. ಫಣಿಪಬಾಣ=ಸರ್ಪಾಸ್ತ್ರ, ತರಣಿಜ=ಸೂರ್ಯನ ಮಗ, ಕರ್ಣ. ವ್ಯೋಮಕೇಶ=ಶಿವ. ಸಾಮಜ=ಆನೆ. ಡಿಂಗರಿಗ=ಸೇವಕ.

ಭಾವ : ವಾಸುದೇವನೇ ಲೋಕದೊಡೆಯ. ತನ್ನ ಭಕ್ತನಾದ ಅರ್ಜುನನಿಗೆ ಒಲಿದು ಅನವ ರಥವನ್ನು ನಡೆಸಿದವನು ಈತ. ಸೂರ್ಯಾಸ್ತಮಾನವಾಗುವುದರೊಳಗಾಗಿ ಕೌರವನ ತಂಗಿಯ ಗಂಡನಾದ ಸೈಂಧವನನ್ನು ವಧಿಸಲು ಅರ್ಜುನನಿಗೆ ಸಹಾಯ ಮಾಡಿದವನು. ಇದರಿಂದ ಅರ್ಜುನ ಅಗ್ನಿಪ್ರವೇಶ ಮಾಡದಂತೆ ರಕ್ಷಿಸಿದವನು. ದುರ್ಯೋಧನನ ತೊಡೆಯನ್ನು ಮುರಿಯೆಂದು ವಾಯು ಕುಮಾರನಾದ ಭೀಮನಿಗೆ ಬೋಧಿಸಿ ತನ್ನ ಭಕ್ತನಾದ ಪಾಂಡವರನ್ನು ಕಾದವನು. ಕರ್ಣನು ಬಿಟ್ಟ ಸರ್ಪ ಬಾಣದಿಂದ ಅರ್ಜುನನನ್ನು ರಕ್ಷಿಸಲು ರಥವನ್ನು ನೆಲಕ್ಕೆ ಅಮುಕಿದವನು. ಸುಪ್ರತೀಕ ಗಜವನ್ನೇರಿ ಭಗದತ್ತ ಹೂಡಿದ ಶಕ್ತ್ಯಾಯುಧಕ್ಕೆ ತನ್ನ ಎದೆಯನ್ನೇ ಒಡ್ಡಿ ಭಕ್ತನನ್ನು ಕಾಪಾಡಿದವನು.

# ಆರು ಹಿತವರು ಎಂದು ನಂಬಬೇಡ

ರಾಗ: ಕಾಂಬೋದಿ, ಝಂಪೆತಾಳ

ಆರು ಹಿತವರು ಎಂದು ನಂಬಬೇಡ ||ಪ||
ಯಾರಿಗ್ಯಾರಿಲ್ಲ ಆಪತ್ತು ಬಂದೊದಗಿದಡೆ ||ಅ||

ಜನಕ ಹಿತಬವನೆಂದು ನಂಬಬಹುದೇ ಹಿಂದೆ
ತನಯ ಪ್ರಹ್ಲಾದನಿಗೆ ಪಿತ ಮುನಿದನು
ಜನನಿಯೇ ರಕ್ಷಿಪಳೆಂತೆಂಬೆನೆ ಆ ಕುಂತಿ
ತನಯ ರಾಧೇಯನಿಗೆ ಎರಡೆಣಿಸಿದ ಮೇಲೆ ||೧||

ಮಗನು ತೆತ್ತಿಗನೆನಲು ಕಂಸ ತನ್ನಯ ಪಿತನ
ವಿಗಡ ಬಂಧನದಿಂದ ಬಂಧಿಸಿದನು
ಜಗವರಿಯೆ ಸೋದರನು ಮಮತೆಯುಳ್ಳವನೆನಲು
ಹಗೆವೆರಸಿ ವಾಲಿಯನು ಅನುಜ ಕೊಲಿಸಿದ ಮೇಲೆ ||೨||

ತನಗೆ ದೇಹಾನುಬಂಧುಗಳೇ ಬಂಧುಗಳೆಂದು
ಮನದಿ ನಿಶ್ಚಯವಾಗಿ ನಂಬಬೇಡ
ಘನಕೃಪಾನಿಧಿ ಕಾಗಿನೆಲೆಯಾದಿ ಕೇಶವನ
ಅನುದಿನ ನಂಬಿದವಗಿಹಪರದಿ ಸುಖವು ||೩||

ಅರ್ಥ: ರಾಧೇಯ=ಕರ್ಣ. ತೆತ್ತಿಗ=ಸೇವಕ

ಭಾವ: ಮನುಷ್ಯನಿಗೆ ಸಂಪೂರ್ಣ ಹಿತವನ್ನು ಬಯಸುವವರು ಜಗತ್ತಿನಲ್ಲಿ ಯಾರೂ ಇಲ್ಲ. ತಂದೆ ತಾಯಿ ಸೋದರಮಗ—ಹೀಗೆ ಯಾವ ಬಂಧುಗಳೂ ನಮ್ಮ ಹಿತವನ್ನು ರಕ್ಷಿಸಲಾರರು. ಮಗ ಪ್ರಹ್ಲಾದನನ್ನು ಹಿಂಸಿಸಿದ ತಂದೆ ಹಿರಣ್ಯಕಶ್ಯಪ, ತನ್ನ ಮಗ ಕರ್ಣನಿಗೇ ಅಪತ್ತು ಎಣಿಸಿದ ತಾಯಿ ಕುಂತಿ, ಮಗ ಕಂಸನಿಂದಲೇ ಬಂಧಿಸಲ್ಪಟ್ಟ ಉಗ್ರಸೇನ, ರಾಮನೊಡಗೂಡಿ ಸೋದರ ವಾಲಿಯನ್ನು ಕೊಲಿಸಿದ ಸುಗ್ರೀವ—ಇವರೇ ಈ ಮಾತಿಗೆ ಸಾಕ್ಷಿ. ಆದಿಕೇಶವನನ್ನು ನಂಬಿದವರಿಗೆ ಮಾತ್ರ ಇಹಪರಗಳೆರಡರಲ್ಲೂ ಸುಖ.

ಎರಡನೇ ಪದ್ಯದ ಭಾವ ಸ್ಪಷ್ಟವಾಗಿಲ್ಲ.

# ದಾಸದಾಸರ ಮನೆಯ ದಾಸಿಯರ ಮಗ ನಾನು

ರಾಗ : ಕಾಂಬೋದಿ, ಝಂಪೆತಾಳ

ದಾಸದಾಸರ ಮನೆಯ ದಾಸಿಯರ ಮಗ ನಾನು || ಪ ||
ಸಾಸಿರನಾಮದೊಡೆಯ ರಂಗಯ್ಯನ ಮನೆಯ || ಅ ||

ಶಂಕುದಾಸರ ಮನೆಯ ಮಂಕುದಾಸನು ನಾನು
ಮಂಕುದಾಸನು ನಾನು ಮರುಳು ದಾಸ
ಸಂಕೀರ್ತನೆಯ ಮಾಡಿ ನೆನೆವ ಭಕ್ತರ ಮನೆಯ
ಬಿಂಕದಿ ಬಾಗಿಲ ಕಾಯ್ವ ಬಡದಾಸ ನಾನಯ್ಯ || ೧ ||

ಕಾಳಿದಾಸರ ಮನೆಯ ಕೀಳುದಾಸ ನಾನಯ್ಯ
ಆಳುದಾಸನು ನಾನು ಮೂಳದಾಸ
ಫಾಲಾಕ್ಷ ಸಖ ನಿನ್ನ ಭಜಿಪ ಭಕ್ತರ ಮನೆಯ
ಆಳಿನಾಳಿನ ದಾಸನಡಿದಾಸ ನಾನಯ್ಯ || ೨ ||

ಹಲವು ದಾಸರ ಮನೆಯ ಹೊಲೆದಾಸ ನಾನಯ್ಯ
ಕುಲವಿಲ್ಲದ ದಾಸ ಕುರುಬ ದಾಸ
ಛಲದಿ ನಿನ್ನ ಭಜಿಸುವವರ ಮನೆಯ ಮಾದಿಗ ದಾಸ
ಸಲೆ ಮುಕ್ತಿ ಪಾಲಿಸೆನ್ನೊಡೆಯ ಕೇಶವನೆ || ೩ ||

ಅರ್ಥ : ಕಾಳಿದಾಸ=ಸಂಸ್ಕೃತದ ಪ್ರಸಿದ್ಧ ಮಹಾಕವಿ. ಫಾಲಕ್ಷ ಸಖ=ಶಿವನ ಸ್ನೇಹಿತನಾದ ವಿಷ್ಣು.

ಭಾವ : ಕನಕದಾಸರ ಅಪಾರ ವಿನಯಶೀಲತೆಯನ್ನು, ಅಹಂಕಾರದ ಸಂಪೂರ್ಣ ನಿರಸನವನ್ನು ಮತ್ತು ಭಕ್ತಿಯ ಪರಾಕಾಷ್ಠೆಯನ್ನು ಇದು ಸೂಚಿಸುತ್ತದೆ.

# ತಲ್ಲಣಿಸದಿರು ಕಂಡ್ಯ ತಾಳು ಮನವೆ

ರಾಗ : ಕೇದಾರಗೌಳ, ಝಂಪೆತಾಳ

ತಲ್ಲಣಿಸದಿರು ಕಂಡ್ಯ ತಾಳು ಮನವೆ ‖ ಪ ‖
ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ ‖ ಅ ‖

ಬೆಟ್ಟದಾ ತುದಿಯಲ್ಲಿ ಹುಟ್ಟಿದಾ ವೃಕ್ಷಕ್ಕೆ
ಕಟ್ಟೆಯನು ಕಟ್ಟಿ ನೀರೆರೆದವರು ಯಾರೊ
ಹುಟ್ಟಿಸಿದ ದೇವ ತಾ ಹೊಣೆಗಾರನಾಗಿರಲು
ಗಟ್ಯಾಗಿ ರಕ್ಷಿಪನು ಇದಕೆ ಸಂಶಯವಿಲ್ಲ ‖ ೧ ‖

ಅಡವಿಯೊಳಗಾಡುವ ಮೃಗ ಪಕ್ಷಿಗಳಿಗೆಲ್ಲ
ಅಡಿಗಡಿಗೆ ಆಹಾರವಿತ್ತವರು ಯಾರೊ
ಹಡೆದ ಜನನಿಯು ತೆರದೆ ಸ್ವಾಮಿ ಹೊಣೆಗೀಡಾಗಿ
ಬಿಡದೆ ರಕ್ಷಿಪನಿದಕೆ ಸಂದೇಹ ಬೇಡ ‖ ೨ ‖

ಕಲ್ಲಿನಲಿ ಹುಟ್ಟಿ ತಾ ಕೂಗುವ ಕಪ್ಪೆಗೆ
ಅಲ್ಲಿ ಆಹಾರವನು ತಂದೀಯುವವರ್ಯಾರೊ
ಬಲ್ಲಿದನು ಕಾಗಿನೆಲೆಯಾದಿ ಕೇಶವ ರಾಯ
ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ ‖ ೩ ‖

ಅರ್ಥ : ವೃಕ್ಷ=ಮರ. ಜನನಿ=ತಾಯಿ. ಬಲ್ಲಿದ=ಜ್ಞಾನಿ.

ಭಾವ : ಭಗವಂತ ಎಲ್ಲರನ್ನು ಕಾಪಾಡುತ್ತಾನೆ, ಇದರಲ್ಲಿ ಸಂದೇಹವೇ ಇಲ್ಲ. ಆದ್ದರಿಂದ ಮನಸ್ಸಿಗೆ ಯಾವ ಆತಂಕ ತಲ್ಲಣಗಳೂ ಬೇಕಾಗಿಲ್ಲ. ಬೆಟ್ಟದ ತುದಿಯಲ್ಲಿ ಹುಟ್ಟುವ ಮರಕ್ಕೆ, ಅಡವಿಯ ಮೃಗಪಕ್ಷಿಗಳಿಗೆ, ಕಲ್ಲಿನೊಳಗೆ ಹುಟ್ಟಿ ಕೂಗುವ ಕಪ್ಪೆಗಳಿಗೆ ನೀರು ಆಹಾರಾದಿಗಳನ್ನು ಒದಗಿಸುವವನು ಭಗವಂತನಲ್ಲದೆ ಮನುಷ್ಯನಲ್ಲ. ಹೆತ್ತ ತಾಯಿ ತನ್ನ ಕಂದನನ್ನು ರಕ್ಷಿಸುವಂತೆ ದೇವರು ಎಲ್ಲರನ್ನೂ ಸಲಹುತ್ತಾನೆ. ದೈವದ ಮೇಲಿನ ಅನನ್ಯ ಶ್ರದ್ಧೆ ನಂಬಿಕೆಗಳನ್ನು ಬೋಧಿಸುತ್ತ, ಮಾನವನಿಗೆ ಭರವಸೆಯನ್ನು ನೀಡುವ ಹಾಡಿದು.

# ಭಜಿಸಿ ಬದುಕೆಲೊ ಮನುಜ

ರಾಗ : ಕಾಂಬೋದಿ, ಝಂಪೆತಾಳ

ಭಜಿಸಿ ಬದುಕೆಲೊ ಮನುಜ ಮನಮುಟ್ಟಿ ಶ್ರೀಹರಿಯ
ಅಜ ಸುರೇಂದ್ರಾದಿಗಳು ಆದಿ ವಂದಿತಪಾದ

ಪಾಕಶಾಸನಗೊಲಿದು ಬಲಿಯ ಮೆಟ್ಟಿದ ಪಾದ
ಕಾಕುಶಕಟನ ತುಳಿದು ಕೊಂದ ಪಾದ
ಲೋಕೇಶನಿಗೆ ಒಲಿದು ಪೂಜೆಗೊಂಬುವ ಪಾದ
ಲೋಕಪಾವನೆ ಗಂಗೆ ಜನಿಸಿದಾ ಪಾದ ‖ ೧ ‖

ಶಿಲೆಯ ಸತಿಯಳನು ಸೌಂದರ್ಯಗೊಳಿಸಿದ ಪಾದ
ಒಲಿದು ಪಾರ್ಥಗೆ ಧರೆಯನೊತ್ತಿದ ಪಾದ
ಕೊಲಿಸಿ ಕಾಳಗದಿ ಕೌರವರ ಕೆಡಹಿದ ಪಾದ
ಬಲಿದ ಕಾಳಿಂಗನನು ತುಳಿದ ಪಾದ ‖ ೨ ‖

ಗರುಡ ಶೇಷಾದಿಗಳು ಪೊತ್ತುಕೊಂಡಿಹ ಪಾದ
ಧರೆಯ ಈರಡಿಮಾಡಿ ಅಳೆದ ಪಾದ
ಸಿರಿ ತನ್ನ ತೊಡೆಯ ಮೇಲಿರಿಸಿ ಸೇವಿಸಿದ ಪಾದ
ವರಕಾಗಿನೆಲೆಯಾದಿ ಕೇಶವನ ಪಾದ ‖ ೩ ‖

ಅರ್ಥ : ಅಜ=ಬ್ರಹ್ಮ. ಪಾಕಶಾಸನ=ಇಂದ್ರ. ಕಾಕು=ಕೆಟ್ಟ. ಶಕಟ=ಶಕಟಾಸುರ, ರಕ್ಕಸ. ಶಿಲೆಯಸತಿ=ಅಹಲ್ಯೆ.

ಭಾವ : ಶ್ರೀಹರಿಯ ಪಾದ ಮಹಿಮೆಯನ್ನು ಇಲ್ಲಿ ವರ್ಣಿಸಲಾಗಿದೆ. ಶ್ರೀಹರಿಯ ಪಾದವೆಂದರೆ ಸಾಮಾನ್ಯವಲ್ಲ. ಅದು ಬ್ರಹ್ಮ ಇಂದ್ರ ಮೊದಲಾದವರಿಂದ ವಂದಿಸಿಕೊಳ್ಳುವ ಪಾದ; ಇಂದ್ರನಿಗಾಗಿ ಬಲಿಯನ್ನು ಪಾತಾಳಕ್ಕೆ ತುಳಿದ ಪಾದ ; ಕೃಷ್ಣಾವತಾರದಲ್ಲಿ ಶಕಟಾಸುರನನ್ನು ತುಳಿದು ಕೊಂದ, ಲೋಕೇಶನಿಂದ ಪೂಜೆ ಪಡೆಯುವ, ಪವಿತ್ರಗಂಗೆ ಜನಿಸಿದ, ಅಹಲ್ಯೆಯನ್ನು ಉದ್ಧರಿಸಿದ, ಕರ್ಣಾರ್ಜುನರ ಸಮರ ಸಂದರ್ಭದಲ್ಲಿ ತೇರನ್ನು ಭೂಮಿಗೊತ್ತಿ ಕರ್ಣನ ಬಾಣದಿಂದ ಅರ್ಜುನನನ್ನು ಉಳಿಸಿದ, ರಣರಂಗದಲ್ಲಿ ಪಾಂಡವರಿಂದ ಕೌರವರನ್ನು ಕೊಲ್ಲಿಸಿದ, ಕಾಳಿಂಗಮರ್ದನ ಮಾಡಿದ, ಗರುಡಶೇಷರಿಂದ ಹೊರಿಸಿಕೊಳ್ಳುವ, ತ್ರಿವಿಕ್ರಮನಾಗಿ ಭೂಮಿ ಆಕಾಶಗಳನ್ನು ಎರಡು ಹೆಜ್ಜೆಯಲ್ಲಿ ಅಳೆದ, ಲಕ್ಷ್ಮಿಯಿಂದ ಸೇವೆ ಪಡೆಯುವ ಮಹಿಮಾವಂತ ಪಾದ. ಇಲ್ಲಿ ಹರಿಯ ಮುಖ್ಯ ಅವತಾರಗಳ ಸಾಧನೆಯನ್ನು ಸೂಚಿಸಲಾಗಿದೆ

# ಆರು ಬಾಳಿದರೇನು

ರಾಗ : ಮೋಹನ, ಅಟತಾಳ

ಆರು ಬಾಳಿದರೇನು ಆರು ಬದುಕಿದರೇನು
ನಾರಾಯಣನ ಸ್ಮರಣೆ ನಮಗಿಲ್ಲದನಕ ‖ ಪ ‖

ಉಣ್ಣಬರದವರಲ್ಲಿ ಊರೂಟವಾದರೆ ಏನು
ಹಣ್ಣು ಬಿಡದ ಮರಗಳು ಹಾಳಾದರೇನು
ಕಣ್ಣಿಲ್ಲದವಗಿನ್ನು ಕನ್ನಡಿಯಿದ್ದು ಫಲವೇನು
ಪುಣ್ಯವಿಲ್ಲದವನ ಪ್ರೌಢಿಮೆ ಮೆರೆದರೇನು ‖ ೧ ‖

ಅಕ್ಕರಿಲ್ಲದವಗೆ ಮಕ್ಕಳಿದ್ದು ಫಲವೇನು
ಹೊಕ್ಕು ನಡೆಯುದ ನಂಟತನದೊಳೇನು
ರೊಕ್ಕವಿಲ್ಲದವರಿಗೆ ಬಂಧುಗಳು ಇದ್ದರೇನು
ಮರ್ಕಟನ ಕೈಯೊಳಗೆ ಮಾಣಿಕ್ಯವಿದ್ದರೇನು ‖ ೨ ‖

ಅಲ್ಪದೊರೆಗಳ ಜೀತ ಎಷ್ಟು ಮಾಡಿದರೇನು
ಬಲ್ಪಂಥವಿಲ್ಲದವನ ಬಾಳ್ವೆಯೇನು
ಕಲ್ಪ ಕಲ್ಪಿತ ಕಾಗಿನೆಲೆಯಾದಿ ಕೇಶವನ
ಅಲ್ಪವೂ ನೆನೆಯದ ನರನಿದ್ದರೇನು ‖ ೩ ‖

ಅರ್ಥ : ಊರೂಟ=ಇಡೀ ಊರಿಗೆ ಹಾಕುವ ಭೋಜನ, ಭೂರಿ ಭೋಜನ. ರೊಕ್ಕ=ಹಣ. ಮರ್ಕಟ=ಮಂಗ, ಕಪಿ. ಬಲ್ಪಂಥ=ಅಭಿಮಾನ. ಕಲ್ಪಕಲ್ಪಿತ=ಯುಗಯುಗಗಳನ್ನು ಸೃಷ್ಟಿಸುವ.

ಭಾವ : ಸದುಪಯೋಗಕ್ಕೆ ಬರದ ವಸ್ತು ವ್ಯಕ್ತಿಗಳು ಏನಿದ್ದರೂ ಎಷ್ಟಿದ್ದರೂ ನಿಷ್ಪ್ರಯೋಜಕ. ಭಗವಂತನನ್ನು ನೆನೆಯದ ಮನುಷ್ಯ ಬದುಕಿದ್ದೂ ವ್ಯರ್ಥ ಎಂಬುದನ್ನು ಹಲವು ನಿದರ್ಶನಗಳ ಮೂಲಕ ಇಲ್ಲಿ ವಿವರಿಸಲಾಗಿದೆ.

## ಎಲ್ಲಾರು ಮಾಡುವುದು ಹೊಟ್ಟೆಗಾಗಿ

ರಾಗ : ನಾದನಾಮಕ್ರಿಯೆ, ಏಕತಾಳ

ಎಲ್ಲಾರು ಮಾಡುವುದು ಹೊಟ್ಟೆಗಾಗಿ ಗೇಣುಬಟ್ಟೆಗಾಗಿ
ತುತ್ತು ಹಿಟ್ಟಿಗಾಗಿ ‖ ಪ ‖

ವೇದ ಶಾಸ್ತ್ರ ಪಂಚಾಂಗ ಓದಿಕೊಂಡು ಪರರಿಗೆ
ಬೋಧನೆಯ ಮಾಡುವುದು ಹೊಟ್ಟೆಗಾಗಿ ಗೇಣುಬಟ್ಟೆಗಾಗಿ ‖ ೧ ‖

ಚಂಡ ಭಟರಾಗಿ ನಡೆದು ಕತ್ತಿ ಢಾಲು ಕೈಲಿ ಹಿಡಿದು
ಖಂಡ ತುಂಡ ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ೨ ‖

ಅಂಗಡಿಗಳನ್ನು ಹೂಡಿ ವ್ಯಂಗ್ಯ ಮಾತುಗಳಾಡಿ
ಭಂಗ ಬಿದ್ದು ಗಳಿಸುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ‖ ೩ ‖

ಕುಂಟೆ ತುದಿಗೆ ಕೊರಡು ಹಾಕಿ ಹೆಂಟೆ ಮಣ್ಣು ಸಮ ಮಾಡಿ
ರೆಂಟೆ ಹೊಡೆದು ಬೆಳೆಸುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ‖ ೪ ‖

ಬೆಲ್ಲದಂತೆ ಮಾತನಾಡಿ ಎಲ್ಲರನ್ನು ಮರುಳು ಮಾಡಿ
ಸುಳ್ಳು ಬೊಗಳಿ ತಿಂಬುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ‖ ೫ ‖

ಕೊಟ್ಟಣವ ಕುಟ್ಟಿಕೊಂಡು ಕಟ್ಟಿಗೆಯ ಹೊತ್ತುಕೊಂಡು
ಕಷ್ಟ ಮಾಡಿ ತಿಂಬುವುದು ಹೊಟ್ಟೆಗಾಗಿ ಗೇಣುಬಟ್ಟೆಗಾಗಿ ‖ ೬ ‖

ತಾಳದಂಡಿಗೆ ಶೃತಿಮೇಳ ತಂಬೂರಿಗೊಂಡು
ಸೂಳೆಯಂತೆ ಕುಣಿಯುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ‖ ೭ ‖

ಸನ್ಯಾಸಿ ಜಂಗಮ ಜೋಗಿ ಜಟ್ಟಿ ಮೊಂಡ ಭೈರಾಗಿ
ನಾನಾವೇಷಗಳೆಲ್ಲ ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ‖ ೮ ‖

ಹಳ್ಳದಲ್ಲಿ ಕುಳಿತುಕೊಂಡು ಕಲ್ಲು ದೊಣ್ಣೆ ಹಿಡಿದುಕೊಂಡು
ಕಳ್ಳತನವ ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ೯ ‖

ಅಂದಣ ಪಲ್ಲಕ್ಕಿ ಏರಿ ಮಂದಿ ಮಾರ್ಬಲ ಕೂಡಿ
ಚೆಂದದಿಂದ ಮೆರೆಯುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ‖ ೧೦ ‖

ಉನ್ನಂತ ಕಾಗಿನೆಲೆಯಾದಿ ಕೇಶವನ ಧ್ಯಾನವನ್ನು
ಮನಮುಟ್ಟಿ ಮಾಡುವುದು ಮುಕ್ತಿಗಾಗಿ ಆನಂದಕ್ಕಾಗಿ ॥ ೧೧ ॥

ಅರ್ಥ : ರೆಂಟೆ=ನೇಗಿಲು. ಢಾಲು=ಗುರಾಣಿ. ಭಂಗ=ಕಷ್ಟ. ಚಂಡ=ಶೂರ.

# ಹೂವ ತರುವರ ಮನೆಗೆ

ರಾಗ : ಮುಖಾರಿ, ಝಂಪೆತಾಳ

ಹೂವ ತರುವರ ಮನೆಗೆ ಹುಲ್ಲ ತರುವೆ ॥ ಪ ॥
ಆವ ಪರಿಯಲಿ ಸಲಹೊ ದೇವ ಚಿನ್ಮಯನೆ ॥ ಅ ॥

ಈರೇಳು ಜನುಮದಿಂ ದಾಸನಾಗಿಹೆ ನಾನು
ಸೇರಿದೆನೊ ತವಶರಣರ ಸೇವೆಗೆ
ಘೋರ ದುರಿತಗಳೆಂಬ ವಾರಿಧಿಯು ಬತ್ತಿಸಿ
ನಾರಸಿಂಹನೆ ದಯದಿ ಸಲಹೆನ್ನ ಸ್ವಾಮಿ ॥ ೧ ॥

ರಂಗನಾಥನೆ ನಿನ್ನ ಡಿಂಗರಿಗನೋ ನಾನು
ಡಂಗುರವ ಹೊಯಿಸಯ್ಯ ದಾಸನೆಂದು
ಭಂಗ ಪಡಿಸದೆ ನಿನ್ನ ಶರಣರೊಳಗಿಂಬಿಟ್ಟು
ಗಂಗೆ ಜನಕನೆ ಕಾಯೊ ಚರಣಕ್ಕೆ ಶರಣು ॥ ೨ ॥

ಎಷ್ಟು ಮಾಡಲು ನಿನ್ನ ಬಂಟನೋ ವೈಷ್ಣವರ
ಹುಟ್ಟುದಾಸಿಯ ಮಗನು ಪರದೇಸಿಯೋ
ಸೃಷ್ಟಿಗೊಡೆಯನೆ ಕಾಗಿನೆಲೆಯಾದಿ ಕೇಶವನೆ ಕೈ
ಬಿಟ್ಟೆಯಾದರೆ ನಿನಗೆ ಹರಿದಾಸರಾಣೆ ॥ ೩ ॥

**ಅರ್ಥ :** ತವ=ನಿನ್ನ. ದುರಿತ=ಪಾಪ. ವಾರಿಧಿ=ಸಮುದ್ರ. ಡಿಂಗರಿಗ=ಸೇವಕ. ಬಂಟ=ಸೇವಕ.

**ಭಾವ :** ಹಲವಾರು ಜನ್ಮಗಳಿಂದ ದಾಸನಾಗಿರುವ ತನ್ನನ್ನು ದೇವರು ತನ್ನ ಆಪ್ತ ಭಕ್ತಗಣದಲ್ಲಿ ಸೇರಿಸಿಕೊಂಡು, ಮತ್ತೆ ಮತ್ತೆ ತನ್ನನ್ನು ಕಾಡಿಸದೆ, ಭಂಗಪಡಿಸದೆ, ಕೈಬಿಡದೆ, ಕಾಪಾಡಬೇಕೆಂದು ಭಗವಂತನಿಗೆ ಮೊರೆಯಿಡುವ ಭಕ್ತನ ಹೃದಯದ ತೀವ್ರ ನಿವೇದನೆ ಇದು. ದಾಸರ ಅನನ್ಯ ಶರಣಾಗತಿಯ ಆರ್ತ ಪ್ರಾರ್ಥನೆ ಇದು. ಹೂವು ತರುವಂಥ ಭಕ್ತರ ಮನೆಗೆ ಹುಲ್ಲನ್ನು ತಂದಾದರೂ ಅವರ ಸೇವೆ ಮಾಡುತ್ತೇನೆ ಎಂಬ, ದಾಸರ ದಾಸರದಾಸ ತಾನೆಂಬ ವಿನೀತಭಾವ ಇಲ್ಲಿದೆ.

# ಇಷ್ಟು ದಿನ ಈ ವೈಕುಂಠ

ರಾಗ: ನೀಲಾಂಬರಿ, ಆಟತಾಳ

ಇಷ್ಟು ದಿನ ಈ ವೈಕುಂಠ
ಎಷ್ಟು ದೂರವೊ ಎನ್ನುತಲಿದ್ದೆ
ದೃಷ್ಟಿಯಿಂದಲಿ ನಾನು ಕಂಡೆ
ಸೃಷ್ಟಿಗೀಶನೆ ಶ್ರೀರಂಗಶಾಯಿ || ಪ ||

ಎಂಟು-ಏಳನು ಕಳೆದುದರಿಂದೆ
ಬಂಟರೈವರ ತುಳಿದುದರಿಂದೆ
ತುಂಟಕನೊಬ್ಬನ ತರೆದುದರಿಂದೆ
ಬಂಟನಾಗಿ ಬಂದೆನೊ ರಂಗಶಾಯಿ || ೧ ||

ವನ-ಉಪವನಗಳಿಂದ
ಘನ ಸರೋವರಗಳಿಂದ
ಕನಕ ಗೋಪುರಗಳಿಂದ
ಘನಶೋಭಿತನೆ ರಂಗಶಾಯಿ || ೨ ||

ವಜ್ರ ವೈಢೂರ್ಯದ ತೊಲೆಗಳ ಕಂಡೆ
ಪ್ರಜ್ವಲಿಪ ಮಹಾದ್ವಾರವ ಕಂಡೆ
ನಿರ್ಜರಾದಿ ಮುನಿಗಳ ಕಂಡೆ
ದುರ್ಜನಾಂತಕನೆ ಶ್ರೀ ರಂಗಶಾಯಿ || ೩ ||

ರಂಭೆ ಊರ್ವಶಿಯರ ಮೇಳವ ಕಂಡೆ
ತುಂಬುರ ಮುನಿ ನಾರದರನು ಕಂಡೆ
ಅಂಬುಜೋದ್ಭವ ರುದ್ರರ ಕಂಡೆ
ಶಂಬರಾರಿಪಿತನೆ ರಂಗಶಾಯಿ || ೪ ||

ನಾಗಶಯನನ ಮೂರುತಿ ಕಂಡೆ
ಭೋಗಿ ಭೂಷಣ ಶಿವನನು ಕಂಡೆ
ಭಾಗವತರ ಸಮ್ಮೇಳವ ಕಂಡೆ
ಕಾಗಿನೆಲೆಯಾದಿ ಕೇಶವ ರಂಗಶಾಯಿ || ೫ ||

ಅರ್ಥ : ಸೃಷ್ಟಿಗೀಶ=ಸೃಷ್ಟಿಗೆ ಒಡೆಯನಾದವ, ದೇವರು. ಶ್ರೀರಂಗಶಾಯಿ=ಮಲಗಿರುವ ರಂಗನಾಥಸ್ವಾಮಿ. ಎಂಟು-ಏಳು=ಅಷ್ಟಮದ ಮತ್ತು ಸಪ್ತವ್ಯಸನಗಳು. ಬಂಟರೈವರು=ಪಂಚೇಂದ್ರಿಯಗಳು. ಶಂಬರಾರಿಪಿತ=ಶಂಬರಾಸುರನನ್ನು ಕೊಂದ ಕಾಮನ ತಂದೆ, ವಿಷ್ಣು. ಭೋಗಿಭೂಷಣ=ಶಿವ.

ಭಾವ : ಭಗವಂತನ ದರ್ಶನ ಸುಲಭಸಾಧ್ಯವಲ್ಲ, ಕಷ್ಟದಾಯಕ ಎಂದು ನಂಬಿದ್ದ ಭಕ್ತನಿಗೆ ಭಗವದ್ದರ್ಶನವಾದಾಗ ಅವನಲ್ಲಿ ಕಂಡುಬಂದ ಪುಳಕ, ಧನ್ಯತೆ ಮತ್ತು ಆನಂದದ ತೀವ್ರತೆಗಳ ಶಕ್ತಿಪೂರ್ಣ ಅಭಿವ್ಯಕ್ತಿ ಇದು.

# ಅಡಿಗೆಯನು ಮಾಡಬೇಕಣ್ಣ

ರಾಗ : ಪಾತುವರಾಳಿ, ಛಾಪುತಾಳ

ಅಡಿಗೆಯನು ಮಾಡಬೇಕಣ್ಣ । ಸಾನೀಗ ಸುಜ್ಞಾನ
ಅಡಿಗೆಯನು ಮಾಡಬೇಕಣ್ಣ ॥ ಪ ॥

ಅಡಿಗೆಯನು ಮಾಡಬೇಕು । ಮಡಿಸಬೇಕು ಮದಗಳನ್ನು
ಒಡೆಯನಾಜ್ಞೆಯಿಂದ ಒಳ್ಳೆ । ಸಡಗರದಿ ಈ ಮನೆಯ ಸಾರಿಸಿ ॥ ಅ ॥

ತನ್ನ ಗುರುವನ್ನು ನೆನೆಯಬೇಕಣ್ಣ । ತನುಭಾವವೆಂಬ
ಭಿನ್ನ ಕಲ್ಮಶವಳಿಯಬೇಕಣ್ಣ
ಒನಕೆಯಿಂದ ಕುಟ್ಟಿ ಕೇರಿ ತನಗೆ ತಾನೆ ಆದ ಕಚ್ಚ
ನನುವರಿತು ಇಕ್ಕಬೇಕು ಅರಿವರ್ಗವೆಂಬ ತುಂಟರಳಿಸಿ ॥ ೧ ॥

ತತ್ವಭಾಂಡವ ತೊಳೆಯಬೇಕಣ್ಣ । ಸತ್ಯಾತ್ಮನಾಗಿ
ಅರ್ತಿ ಅಕ್ಕಿಯ ಮಥಿಸಬೇಕಣ್ಣ
ಕತ್ತರಿ ಮನವೆಂಬ ಹೊಟ್ಟನ್ನು ಎತ್ತಿ ಒಲೆಗೆ ಹಾಕಿ ಇನ್ನು
ಹೊತ್ತಿಕೊಂಡಿಹ ಮಮತೆಯನ್ನು ಎತ್ತಿ ಹೆಸರ ಹಿಂಗಿಸುತಲಿ ॥ ೨ ॥

ಜನನ ಸೊಂಡಿಗೆ ಹುರಿಯಬೇಕಣ್ಣ । ನಿಜವಾಗಿ ನಿಂತು
ತನುವು ತುಪ್ಪವ ಕಾಸಬೇಕಣ್ಣ
ಕನಕಗಿರಿ ನೆಲೆಯಾದಿ ಕೇಶವದಾಸ
ಕನಕನ ಕಟ್ಟಳೆಯೊಳು ನಿಂತು ಸುಖದ ಪಾಕವನು
ಚಂದದಿಂ ಸವಿದುಣ್ಣಲಿಕ್ಕೆ ॥ ೩ ॥

ಅರ್ಥ : ಮಡಿಸು=ಕೊಲ್ಲು, ನಾಶಮಾಡು. ತನು=ಶರೀರ. ಅರಿವರ್ಗ=ಕಾಮ ಕ್ರೋಧ ಲೋಭ ಮೋಹ ಮದ ಮಾತ್ಸರ್ಯವೆಂಬ ಅರಿಷಡ್ವರ್ಗಗಳು. ಭಾಂಡ=ಮಡಕೆ. ಅರ್ತಿ=ಪ್ರೀತಿ, ಇಚ್ಛೆ. ಸೊಂಡಿಗೆ=ಸಂಡಿಗೆ. ಕಟ್ಟಳೆ=ಅಪ್ಪಣೆ, ಆಜ್ಞೆ.

ಭಾವ : ಜ್ಞಾನ ಸಾಧನೆ ಮಾಡಿ ದೈವ ಸಾಕ್ಷಾತ್ಕಾರದ ಆನಂದವನ್ನು ಸವಿಯುವ ಕಾರ್ಯವನ್ನು ಇಲ್ಲಿ ಅಡಿಗೆಯ ಕ್ರಿಯೆಗೆ ಅತ್ಯಂತ ಸಂಗತವಾಗಿ ಹೋಲಿಸಲಾಗಿದೆ. ಕನಕದಾಸರ ವಸ್ತುಸಾದೃಶ್ಯಜ್ಞಾನಕ್ಕೆ ಮತ್ತು ಅಮೂರ್ತವಾದುದನ್ನು ಮೂರ್ತಗೊಳಿಸಿ ಇಂದ್ರಿಯಗಮ್ಯಗೊಳಿಸುವ ಸಾಮರ್ಥ್ಯಕ್ಕೆ ಇದು ಸುಂದರ ನಿದರ್ಶನವಾಗಿದೆ.

# ಬಾಗಿಲನು ತೆರೆದು ಸೇವೆಯನು ಕೊಡೊ ಹರಿಯೆ

ರಾಗ: ಅಠಾಣ, ಅಟತಾಳ

ಬಾಗಿಲನು ತೆರೆದು ಸೇವೆಯನು ಕೊಡೊ ಹರಿಯೆ ॥ ಪ ॥
ಕೂಗಿದರು ಧ್ವನಿ ಕೇಳಲಿಲ್ಲವೇ ನರಹರಿಯೆ ॥ ಅ ॥

ಪರಮಪದದೊಳಗೆ ವಿಷಧರನ ತಲ್ಪದಲಿ ನೀ
ಸಿರಿಸಹಿತ ಕ್ಷೀರವಾರಿಧಿಯೊಳಿರಲು
ಕರಿರಾಜ ಕಷ್ಟದಲಿ ಆದಿಮೂಲ ಎಂದು
ಕರೆಯಲಾಕ್ಷಣ ಬಂದು ಒದಗಿದೆಯೊ ನರಹರಿಯೆ ॥ ೧ ॥

ಕಡುಕೋಪದಿಂ ಖಳನು ಖಡುಗ ಕೈಯಲ್ಲಿ ಪಿಡಿದು ನಿ
ನ್ನೊಡೆಯನೆಲ್ಲಿಹನೆಂದು ಕಂಬವನು ಜಡಿಯೆ
ದೃಢಭಕುತಿಯಿಂ ಶಿಶುವು ಬಿಡದೆ ನಿನ್ನನು ಭಜಿಸೆ
ಸಡಗರದಿ ಸ್ತಂಭದಿಂದೊಡೆದೆ ನರಹರಿಯೆ ॥ ೨ ॥

ಯಮಸುತನ ರಾಣಿಗಕ್ಷಯವಸನವಸಿತ್ತೆ
ಸಮಯದಲಿ ಅಜಮಿಳನ ಪೊರೆದೆ
ಸಮಯಾಸಮಯವುಂಟೆ ಭಕ್ತವತ್ಸಲ ನಿನಗೆ
ಕಮಲಾಕ್ಷ ಕಾಗಿನೆಲೆಯಾದಿ ಕೇಶವನೆ ॥ ೩ ॥

ಅರ್ಥ : ಪರಮಪದ=ವೈಕುಂಠ. ವಿಷಧರ=ಆದಿಶೇಷ. ತಲ್ಪ=ಹಾಸಿಗೆ. ಕ್ಷೀರವಾರಿಧಿ=ಹಾಲಿನ ಸಮುದ್ರ. ಕರಿರಾಜ=ಗಜೇಂದ್ರ. ಆದಿಮೂಲ=ಪರಮಾತ್ಮ. ಯಮಸುತ=ಧರ್ಮರಾಯ. ಅಜಮಿಳ=ಒಬ್ಬ ಬ್ರಾಹ್ಮಣ, ಕೊನೆಗೆ ವಿಷ್ಣುಭಕ್ತನಾಗಿ ಪರಿವರ್ತಿತನಾದವನು.

ಭಾವ : ಗಜೇಂದ್ರ, ಪ್ರಹ್ಲಾದ, ಅಜಮಿಳ, ದ್ರೌಪದಿ ಮುಂತಾದ ಭಕ್ತರು ತಮ್ಮ ಕಷ್ಟಕಾಲದಲ್ಲಿ ಕರೆದ ಕೂಡಲೇ ದರ್ಶನವಿತ್ತು ಅವರನ್ನು ಆ ಸಂಕಟಗಳಿಂದ ಪಾರು ಮಾಡಿದ ಭಗವಂತ ತನಗೂ ಆ ಮೂರ್ತಿದರ್ಶನ ಭಾಗ್ಯವಿತ್ತು ಕಾಪಾಡಬೇಕೆಂದು ಅತ್ಯಂತ ತೀವ್ರತೆ ಆರ್ತತೆಗಳಿಂದ ಮೊರೆಯಿಡುತ್ತಿದ್ದಾರೆ ಕನಕದಾಸರು. ಉಡುಪಿಯ ಶ್ರೀಕೃಷ್ಣ ದೇವಾಲಯದ ಹಿಂದೆ ನಿಂತು ಈ ಪ್ರಾರ್ಥನೆಯನ್ನು ದಾಸರು ಹಾಡಿದರೆಂದೂ ಕೃಷ್ಣ ಹಿಂದುಮುಂದಾಗಿ ತಿರುಗಿ, ಅಲ್ಲಿ ಕಿಂಡಿಯಾಗಿ, ಕನಕನಿಗೆ ದರ್ಶನವಿತ್ತನೆಂದೂ ಪ್ರತೀತಿಯಿದೆ.

# ನೀ ಮಾಯೆಯೊಳಗೋ

ರಾಗ: ಕಾಂಬೋದಿ, ಝಂಪೆತಾಳ

ನೀ ಮಾಯೆಯೊಳಗೋ ನಿನ್ನೊಳು ಮಾಯೆಯೊ ||ಪ||
ನೀ ದೇಹದೊಳಗೋ ನಿನ್ನೊಳು ದೇಹವೋ ಹರಿಯೆ ||ಅ||

ಬಯಲೊಳಗೆ ಆಲಯವೊ ಆಲಯದೊಳಗೆ ಬಯಲೊ
ಬಯಲು ಆಲಯವೆರಡು ನಯನದೊಳಗೊ
ನಯನ ಬುದ್ಧಿಯ ಒಳಗೊ ಬುದ್ಧಿ ನಯನದ ಒಳಗೊ
ನಯನ ಬುದ್ಧಿಗಳೆರಡು ನಿನ್ನೊಳಗೊ ಹರಿಯೆ ||೧||

ಸವಿಯು ಸಕ್ಕರೆಯೊಳಗೊ ಸಕ್ಕರೆಯು ಸವಿಯೊಳಗೊ
ಸವಿಯು ಸಕ್ಕರೆಯೆರಡು ಜಿಹ್ವೆಯೊಳಗೊ
ಜಿಹ್ವೆ ಮನಸಿನ ಒಳಗೊ ಮನಸು ಜಿಹ್ವೆಯ ಒಳಗೊ
ಜಿಹ್ವೆ ಮನಸುಗಳೆರಡು ನಿನ್ನೊಳಗೊ ಹರಿಯೆ ||೨||

ಕುಸುಮದಲಿ ಗಂಧವೊ ಗಂಧದಲಿ ಕುಸುಮವೊ
ಕುಸುಮಗಂಧಗಳೆರಡು ಆಘ್ರಾಣದೊಳಗೊ
ಅಸಮಭವ ಕಾಗಿನೆಲೆಯಾದಿಕೇಶವರಾಯ
ಉಸುರಲೆನ್ನಳವಲ್ಲ ಎಲ್ಲ ನಿನ್ನೊಳಗೊ ಹರಿಯೆ ||೩||

**ಅರ್ಥ:** ಮಾಯೆ=ಭ್ರಾಂತಿ. ಆಲಯ=ಮನೆ. ಜಿಹ್ವೆ=ನಾಲಗೆ. ಆಘ್ರಾಣ=ಮೂಸುವುದು, ಮೂಗು. ಅಸಮಭವ=ಅದ್ವಿತೀಯ.

**ಭಾವ:** ದೈವ–ಮಾಯೆ, ದೈವ–ದೇಹ, ಬಯಲು=ಮನೆ, ಬಯಲು-ಮನೆ-ಕಣ್ಣು, ಕಣ್ಣು–ಬುದ್ಧಿ, ಸವಿ–ಸಕ್ಕರೆ–ಜಿಹ್ವೆ, ಜಿಹ್ವೆ–ಮನಸ್ಸು, ಕುಸುಮ-ಗಂಧ–ಮೂಗು ಇವುಗಳ ಪರಸ್ಪರ ಸಂಬಂಧ ಅನಾದಿಯಾದದ್ದು, ಅವಿರತವಾದದ್ದು ಮತ್ತು ಅನಿವಾರ್ಯವಾದದ್ದು. ಆದರೆ ಯಾವುದು ಮೊದಲು, ಯಾವುದರಿಂದ ಯಾವುದು ಹುಟ್ಟಿತು ಎಂಬ ಸಮಸ್ಯೆ ಬೀಜವೃಕ್ಷನ್ಯಾಯದಂತೆ ಬಗೆಹರಿಸಲಾಗದ್ದು. ಆದರೆ ಇವುಗಳೆಲ್ಲ ಹುಟ್ಟಿದ್ದು ಭಗವಂತನಿಂದಲೇ ಎಂಬುದು ಮಾತ್ರ ಪರಮಸತ್ಯ. ಬದುಕಿಗೆ ಆಧಾರವಾದ ಸಮಸ್ತವೂ ದೇವರಿಂದಲೇ ದೇವರೊಳಗಿನಿಂದಲೇ ಸೃಷ್ಟಿಯಾದದ್ದು ಎಂಬುದು ಇಲ್ಲಿ ದಾಸರ ನಿಲವು. ದೈವದ ಸಾರ್ವಭೌಮ ಸಾಮರ್ಥ್ಯವನ್ನು ಇಲ್ಲಿ ದಾಸರು ಪ್ರತಿಪಾದಿಸುತ್ತಿದ್ದಾರೆ.

# ಕುಲ ಕುಲ ಕುಲವೆನ್ನುತಿಹರು

ರಾಗ: ಮಧ್ಯಮಾವತಿ, ಝಂಪೆತಾಳ

ಕುಲಕುಲ ಕುಲವೆನ್ನುತಿಹರು || ಪ ||
ಕುಲವ್ಯಾವುದು ಸತ್ಯಸುಖವುಳ್ಳ ಜನರಿಗೆ || ಅ ||

ಕೆಸರೊಳು ತಾವರೆಹುಟ್ಟಲು ಅದ ತಂದು
ಬಿಸಜನಾಭನಿಗರ್ಪಿಸಲಿಲ್ಲವೆ
ಹಸುವಿನ ಮಾಂಸದೊಳುತ್ಪತ್ತಿ ಕ್ಷೀರವು
ವಸುಧೆಯೊಳಗೆ ಭೂಸುರರುಣ್ಣಲಿಲ್ಲವೆ || ೧ ||

ಮೃಗಗಳ ಮೈಯಲ್ಲಿ ಹುಟ್ಟಿದ ಕಸ್ತೂರಿ
ತೆಗೆದು ಪೂಸುವರು ಭೂಸುರರೆಲ್ಲರು
ಒಗೆಯಿಂದ ನಾರಾಯಣನ್ಯಾವ ಕುಲದವ
ಅಗಜವಲ್ಲಭನ್ಯಾತರ ಕುಲದವನು || ೨ ||

ಆತ್ಮ ಯಾವ ಕುಲ ಜೀವ ಯಾವ ಕುಲ
ತತ್ವೇಂದ್ರಿಯಂಗಳ ಕುಲ ಪೇಳಿರಯ್ಯ
ಆತ್ಮಾಂತರಾತ್ಮ ನೆಲೆಯಾದಿ ಕೇಶವ
ಆತನೊಲಿದ ಮೇಲೆ ಯಾತರ ಕುಲವಯ್ಯ || ೩ ||

ಅರ್ಥ : ಬಿಸಜನಾಭ=ಕಮಲವನ್ನು ಹೊಕ್ಕುಳಲ್ಲಿ ಉಳ್ಳವನು, ವಿಷ್ಣು. ವಸುಧೆ=ಭೂಮಿ, ಭೂಸುರ=ಬ್ರಾಹ್ಮಣ. ಪೂಸು=ಲೇಪಿಸು. ಒಗೆ-ಹುಟ್ಟು. ಅಗಜವಲ್ಲಭ=ಪಾರ್ವತಿಯ ಪತಿ, ಶಿವ. ತತ್ತ್ವೇಂದ್ರಿಯ=ಜ್ಞಾನೇಂದ್ರಿಯ.

ಭಾವ : ಸತ್ಯವಂತರಾದ ಜನಕ್ಕೆ ಯಾವುದೇ ಕುಲವಿಲ್ಲ. ವಸ್ತು ಅಥವಾ ವ್ಯಕ್ತಿಗಳ ಗುಣಶೀಲಗಳನ್ನು ನಾವು ಗಮನಿಸಬೇಕೇ ಹೊರತು ಅವುಗಳ ಅಥವಾ ಅವರ ಹುಟ್ಟನ್ನಲ್ಲ, ಜಾತಿಯನ್ನಲ್ಲ ಎಂಬುದನ್ನು ಹಲವು ಸುಪರಿಚಿತ ನಿದರ್ಶನಗಳ ಮೂಲಕ ದಾಸರು ವಿವರಿಸುತ್ತ ಭಗವಂತನು ಯಾರಿಗೆ ಒಲಿಯುತ್ತಾನೋ ಅವನ ಕುಲವನ್ನು ಗಣಿಸಬಾರದು ಎಂದು ಸೂಚಿಸುತ್ತಾರೆ.

# ಕುಲ ಕುಲ ಕುಲವೆಂದು ಹೊಡೆದಾಡದಿರಿ

ರಾಗ : ಪಂತುರಾವಳಿ, ಅಟತಾಳ

ಕುಲ ಕುಲ ಕುಲವೆಂದು ಹೊಡೆದಾಡದಿರಿ ನಿಮ್ಮ
ಕುಲದ ನೆಲೆಯನೇನಾದರೂ ಬಲ್ಲಿರ ‖ ಪ ‖

ಹುಟ್ಟಿದ ಯೋನಿಗಳಿಲ್ಲ ಮೆಟ್ಟಿದ ಭೂಮಿಗಳಿಲ್ಲ
ಅಟ್ಟು ಉಣ್ಣದ ವಸ್ತುಗಳಿಲ್ಲ
ಗುಟ್ಟು ಕಾಣಿಸ ಬಂತು ಹಿರಿದೇನು ಕಿರಿದೇನು
ನೆಟ್ಟನೆ ಸರ್ವಜ್ಞನ ನೆನೆಕಂಡ್ಯ ಮನುಜ ‖ ೧ ‖

ಜಲವೆ ಸಕಲ ಕುಲಕ್ಕೆ ತಾಯಲ್ಲವೆ
ಜಲದ ಕುಲವನೇನಾದರೂ ಬಲ್ಲಿರ
ಜಲದ ಬೊಬ್ಬುಳಿಯಂತೆ ಸ್ಥಿರವಲ್ಲವೀದೇಹ
ನೆಲೆಯನರಿತು ನೀ ನೆನೆಕಂಡ್ಯ ಮನುಜ ‖ ೨ ‖

ಹರಿಯೇ ಸರ್ವೋತ್ತಮ ಹರಿಯೆ ಸರ್ವೇಶ್ವರ
ಹರಿಮಯವೆಲ್ಲವೆನುತ ತಿಳಿದು
ಸಿರಿಕಾಗಿನೆಲೆಯಾದಿ ಕೇಶವರಾಯನ
ಚರಣ ಕಮಲವ ಕೀರ್ತಿಸುವನೆ ಕುಲಜ ‖ ೩ ‖

ಅರ್ಥ : ನೆಲೆ=ಮೂಲ, ಆದಿ, ರಹಸ್ಯ. ಜಲಜ=ತಾವರೆ, ಬೊಬ್ಬುಳಿ=ನೀರಿನ ಗುಳ್ಳೆ.

ಭಾವ : ಜಾತಿಯ ಹೆಸರನ್ನು ಹೇಳುತ್ತ ಪರಸ್ಪರ ಕಚ್ಚಾಡುವ ಮನುಷ್ಯರನ್ನು ಇಲ್ಲಿ ತರಾಟೆಗೆ ತೆಗೆದುಕೊಂಡಿದ್ದಾರೆ ದಾಸರು. ಅತ್ಯಂತ ಉಚಿತವಾದ ಮತ್ತು ಪರಿಚಿತವಾದ ಉದಾಹರಣೆಗಳ ಮೂಲಕ ಜಾತಿಯ ಅಸ್ತಿತ್ವವನ್ನು ಅಲ್ಲಗಳೆದು, ನೀರಗುಳ್ಳೆಯಂತೆ ಕ್ಷಣಿಕವಾದ ದೇಹವನ್ನು ನಚ್ಚದೆ ಭಗವಂತನನ್ನು ನೆನೆಯಬೇಕು ಮಾನವ ಎಂದು ಘೋಷಿಸುತ್ತಾರೆ. ಹರಿಯೇ ಸರ್ವಶ್ರೇಷ್ಠ, ಜಗತ್ತೆಲ್ಲ ಹರಿಮಯ. ಅವನನ್ನು ಆರಾಧಿಸುವವನೇ ನಿಜವಾದ ಕುಲಜ ಎಂದು ಸಾರುತ್ತಾರೆ.

# ದೇವಿ ನಮ್ಮ ದ್ಯಾವರು ಬಂದರು

ರಾಗ : ದೇಶಿ, ಛಾಪುತಾಳ

ದೇವಿ ನಮ್ಮ ದ್ಯಾವರು ಬಂದರು ಬನ್ನಿರೆ ನೋಡಬನ್ನಿರೆ ‖ ಪ ‖

ಕೆಂಗಣ್ಣ ಮೀನನಾಗಿ | ನಮರಂಗ
ಗುಂಗಾಡಿ ಸೋಮನ ಕೊಂದಾನಮ್ಮ ಶಿ
ಗುಂಗಾಡಿ ಸೋಮನ ಕೊಂದು ವೇದವ
ಭಂಗಾರದೊಡಲಿನಿಗಿತ್ತಾನಮ್ಮ ಶಿ ‖ ೧ ‖

ದೊಡ್ಡ ಮಡುವಿನೊಳಗೆ | ನಮರಂಗ
ಗುಡ್ಡವ ಹೊತ್ತುಕೊಂಡು ನಿಂತಾನಮ್ಮ ಶಿ
ಗುಡ್ಡವ ಹೊತ್ತುಕೊಂಡು ನಿಂತು ಸುರರನು
ದೊಡ್ಡವರನ್ನು ಮಾಡ್ಯಾನಮ್ಮ ಶಿ ‖ ೨ ‖

ಚನ್ನ ಕಾಡಿನ ಹಂದಿಯಾಗಿ | ನಮರಂಗ
ಚಿನ್ನದ ಕಣ್ಣನ ಕೊಂದಾನಮ್ಮ ಶಿ
ಚಿನ್ನದ ಕಣ್ಣನ ಕೊಂದು ಭೂಮಿಯ
ವನಜ ಸಂಭವನಿಗಿತ್ತಾನಮ್ಮ ಶಿ ‖ ೩ ‖

ಸಿಟ್ಟಲಿ ಸಿಂಹನಾಗಿ | ನಮರಂಗ
ಹೊಟ್ಟೆಯ ಕರುಳ ಬಗಿದಾನಮ್ಮ ಶಿ
ಹೊಟ್ಟೆಯ ಕರುಳ ಹಾರವ ಮಾಡಿ
ಪುಟ್ಟಗೆ ವರವ ಕೊಟ್ಟಾನಮ್ಮ ಶಿ ‖ ೪ ‖

ಹುಡುಗ ಹಾರುವನಾಗಿ | ನಮರಂಗ
ಬಿಡಗಲಿ ಮುಗಿಲಿಗೆ ಬೆಳೆದಾನಮ್ಮ ಶಿ
ಬಿಡಗಲಿ ಮುಗಿಲಿಗೆ ಬೆಳೆದು ಬಲಿಯನ್ನು
ಆಡಿಯಿಂದ ಪಾತಾಳಕೊತ್ತ್ಯಾನಮ್ಮ ಶಿ ‖ ೫ ‖

ತಾಯ ಮಾತನು ಕೇಳಿ | ಸಾಸಿರ ತೋಳಿನ
ಆವಿನ ಕಳ್ಳನ ಕೊಂದಾನಾ್ಮ ಶಿ
ಆವಿನಕಳ್ಳನ ಕೊಂದು ಭೂಮಿಯ
ಅವನಿಸುರರಿಗೆ ಇತ್ತಾನಾ್ಮ ಶಿ || ೬ ||

ಕೆಂಗ್ಯಾಳಿ ಕಣ್ಣಿನ ಕೊಂಗಗಳ ಕೂಡಿ
ಜಂಘೇಲಿ ಲಂಕೆಗೆ ಪೋದಾನಾ್ಮ ಶಿ
ಜಂಘೇಲಿ ಲಂಕೆಗೆ ಪೋಗಿ | ನಮರಂಗ
ಹೆಂಗಸು ಕಳ್ಳನ ಕೊಂದಾನಾ್ಮ ಶಿ || ೭ ||

ಕರಿಯ ಹೊಳೆಯಲ್ಲಿ ತುರುಗಳ ಕಾಯುತ
ಉರಗನ ಮಡುವ ಧುಮುಕ್ಯಾನಾ್ಮ ಶಿ
ಉರಗನ ಹೆಡೆಮೇಲೆ ಹಾರಾರಿ ಕುಣಿವ್ಯಾಗ
ಯಾರ್ಯಾರಿಗೇನೇನು ಇತ್ತಾನಾ್ಮ ಶಿ || ೮ ||

ಬಿಂಕದ ಗೋವಳನಾಗಿ | ನಮರಂಗ
ಡೊಂಕಾದ ಮುದುಕಿಯ ಕೂಡ್ಯಾನಾ್ಮ ಶಿ
ಡೊಂಕಾದ ಮುದುಕಿಯ ಕೂಡಿ ಮಾವನ
ಬಿಂಕವ ಮುರಿದು ಕುಣಿದಾನಾ್ಮ ಶಿ || ೯ ||

ಭಂಡನಂದದಿ ಪುಂಡರೀಕಾಕ್ಷನು
ಕಂಡಕಂಡಲ್ಲಿಗೆ ತಿರುಗ್ಯಾನಾ್ಮ ಶಿ
ಕಂಡಕಂಡಲ್ಲಿಗೆ ತಿರುಗಿ ತ್ರಿಪುರರ
ಹೆಂಡಿರನೆಲ್ಲ ಕೆಡಿಸ್ಯಾನಾ್ಮ ಶಿ || ೧೦ ||

ಚೆಲುವೆ ಹೆಂಡತಿ ಕುದುರೆಯ ಮಾಡಿ
ಒಳ್ಳೆ ರಾವುತನಾದಾನಾ್ಮ ಶಿ
ಒಳ್ಳೆ ರಾವುತನಾಗಿ ನಮರಂಗ
ಡೊಳ್ಳು ಹೊಟ್ಟೆಯ ಮೇಲೊದ್ದಾನಾ್ಮ ಶಿ || ೧೧ ||

ಡೋಳಿನ ಮೇಲ್ ಕೈ ಬರಮಪ್ಪ ಹಾಕ್ಯಾನು
ತಾಳವ ಶಿವನಪ್ಪ ತಟ್ಯಾನ್ಮ್ಯಾ ಶಿ
ಒಳ್ಳೊಳ್ಳೆ ಪದಗಳು ಹನುಮಪ್ಪ ಹಾಡ್ಯಾನು
ಚೆಲುವ ಕನಕಪ್ಪ ಕುಣಿದಾನ್ಮ್ಯಾ ಶಿ ॥ ೧೨ ॥

**ಅರ್ಥ :** ಕೆಂಗಣ್ಣ ಮೀನ=ಮತ್ಸ್ಯಾವತಾರ. ಗುಂಗಾಡಿ ಸೋಮಾ=ಸೋಮುಕ ಎಂಬ ರಾಕ್ಷಸ. ಭಂಗಾರದೊಡಲನ್=ಬ್ರಹ್ಮ. ಗುಡ್ಡ ಹೊತ್ತುಕೊಂಡು ನಿಂತವ=ಕೂರ್ಮಾವತಾರ. ಚನ್ನಕಾಡಿನ ಹಂದಿ=ವರಹಾವತಾರ. ಚಿನ್ನದ ಕಣ್ಣ=ಹಿರಣ್ಯಾಕ್ಷನೆಯ ರಾಕ್ಷಸ. ವನಜಸಂಭವ=ಬ್ರಹ್ಮ. ಸಿಂಹ=ನರಸಿಂಹಾವತಾರ. ಪುಟ್ಟ=ಪ್ರಹ್ಲಾದ. ಹುಡುಗ ಹಾರವ=ವಾಮನ, ತ್ರಿವಿಕ್ರಮ. ಬಲಿ=ಬಲಿ ಚಕ್ರವರ್ತಿ. ಸಾಸಿರತೋಳಿನ ಆವಿನಕಳ್ಳ=ಕಾರ್ತವೀರ್ಯಾರ್ಜುನ. ಕೊಂಗ=ಕಪಿ. ಜಂಘೇಲಿ=ತೊಡೆಯ ಶಕ್ತಿ. ಹೆಂಗಸುಕಳ್ಳ=ರಾವಣ. ಕರಿಯಹೊಳೆ=ಯಮುನಾನದಿ. ಉರುಗ=ಸರ್ಪ, ಕಾಳಿಂಗ. ಡೊಂಕಾದ ಮುದುಕಿ=ಕುಬ್ಜೆ, ಕಂಸನ ದಾಸಿ. ಮಾವ=ಕಂಸ. ತ್ರಿಪುರರು=ತಾರಕಾಸುರನ ಮೂವರು ಮಕ್ಕಳು. ರಾವುತ=ಕಲ್ಕಿ. ಬರಮಪ್ಪ=ಬ್ರಹ್ಮ.

**ಭಾವ :** ವಿಷ್ಣುವಿನ ಧಶಾವತಾರಗಳಲ್ಲಿ ಬೌದ್ಧವತಾರವನ್ನು ಬಿಟ್ಟು ಉಳಿದ ಒಂಬತ್ತು ಕಥೆಯನ್ನು ಗ್ರಾಮೀಣ ಭಾಷೆಯಲ್ಲಿ ಇಲ್ಲಿ ದಾಸರು ವರ್ಣಿಸಿದ್ದಾರೆ.

# ನಾವು ಕುರುಬರು

ರಾಗ: ಮುಖಾರಿ, ಝಂಪೆತಾಳ

ನಾವು ಕುರುಬರು ನಮ್ಮ ದೇವರೊ ಬೀರಯ್ಯ ||ಪ||
ಕಾವ ನಮ್ಮಜ್ಜ ನರಕುರಿಯ ಹಿಂಡುಗಳ ||ಅ||

ಅಷ್ಟ ಮದ ಮತ್ಸರಗಳೆಂತೆಂಬ ಟಗರುಗಳು
ದೃಷ್ಟಿ ಜೀವಾತ್ಮನೆಂಬೊ ಆಡು
ಸೃಷ್ಟಿ ಪ್ರಸಿದ್ಧವೆಂತೆಂಬುವಾ ತೋತಗಳು
ಕಟ್ಟಿ ಕೋಲಿನಲಿ ಇರುತಿರುವ ನಮ್ಮಜ್ಜ ||೧||

ವೇದಶಾಸ್ತ್ರ ಪುರಾಣವೆಂತೆಂಬ ಶ್ವಾನಗಳು
ಕಾದಿದ್ದು ನಮ್ಮಜ್ಜ ಹಿಂಡಿನೊಳಗೆ
ಹಾದಿಗಾಣದೆ ಕೂಗಿ ಬಾಯಾರಿ ಕಾಲ್ಗೆರಗೆ
ಆದರಿಸಿ ಅಂಬಲಿಯ ನೆರೆವನಮ್ಮಜ್ಜ ||೨||

ಅರುಹೆಂಬ ಮರಿಗಳು ಹಿಂಡಿನೊಳಗೆ ಬಂದು
ಮರವೆಯಲಿ ಯಮನೆಂಬ ತೋಳ ಹೊಕ್ಕು
ತರುಬಿ ಹಿಂಜಾವದಲಿ ಕುರಿಯ ಮುರಿವುದ ಕಂಡು
ಅರಿತು ಅರಿಯದ ಹಾಗೆ ಇರುವ ನಮ್ಮಜ್ಜ ||೩||

ಹುಟ್ಟೋದಕೆ ಮೊದಲಿಲ್ಲ ಸಾಯೋದಕೆ ಕೊನೆಯಿಲ್ಲ
ಹುಟ್ಟು ಸಾವಿನ ಹೊಲಬ ಬಲ್ಲ ನಮ್ಮಜ್ಜ
ಅಷ್ಟು ಪ್ರಾಣಿಗಳಿಗೆ ಇಷ್ಟು ಅಂಬಲಿ ಮಾಡಿ
ಹೊಟ್ಟೆ ತುಂಬುವ ಹಾಗೆ ಎರೆವ ನಮ್ಮಜ್ಜ ||೪||

ಕಲಿಯುಗಕೆ ಗೌಡನಿವ ಸಂಗಾತಿ ಮಂತ್ರಿ ಸುತ
ಕಲಿಯುಗಂಗಳನೆಲ್ಲ ಮರೆತನೀತ
ಜಲಜಾಕ್ಷ ಕಾಗಿನೆಲೆಯಾದಿ ಕೇಶವನ ಮನ
ವೊಲಿಸಿ ಭಜಿಸದವನು ಹುಚ್ಚು ಕುರುಬ ||೫||

ಅರ್ಥ : ಅಷ್ಟಮದ=ಅನ್ನ, ಅರ್ಥ, ಯೌವನ, ಸ್ತ್ರೀ, ವಿದ್ಯೆ, ಕುಲ, ರೂಪ, ಉದ್ಯೋಗ. ಶ್ವಾನ=ನಾಯಿ. ಅರುಹು=ಜ್ಞಾನ. ತರುಬು=ಅಡ್ಡಗಟ್ಟು. ಹೊಲಬು=ದಾರಿ. ಎರೆ=ಊಡಿಸು.

ಭಾವ : ಮಾನವರೆಲ್ಲ ಪಶುಗಳು. ಇವರನ್ನು ಚಚ್ಚರದಿಂದ ಪೋಷಿಸುವವನು, ಕಾಪಾಡುವವನು ಭಗವಂತ. ಇಲ್ಲಿ ಬೀರಯ್ಯನೇ ವಿಷ್ಣು ಎಂಬ ಭಾವ ದಾಸರಿಗಿದೆ.

# ಡೊಂಕು ಬಾಲದ ನಾಯಕರೆ

ರಾಗ : ನವರೋಜ್, ಆದಿತಾಳ

ಡೊಂಕು ಬಾಲದ ನಾಯಕರೇ
ನೀವೇನೂಟವ ಮಾಡಿದಿರಿ ‖ ಪ ‖

ಕಣಕ ಕುಟ್ಟೋ ಅಲ್ಲಿಗೆ ಹೋಗಿ
ಹಣುಕಿ ಇಣುಕಿ ನೋಡುವಿರಿ
ಕಣಕ ಕುಟ್ಟೋ ಒನಕಿಲಿ ಹೊಡೆದರೆ
ಕುಂಯಿ ಕುಂಯಿ ರಾಗವ ಹಾಡುವಿರಿ ‖ ೧ ‖

ಹುಗ್ಗಿ ಮಾಡೋ ಅಲ್ಲಿಗೆ ಹೋಗಿ
ತಗ್ಗಿ ಬಗ್ಗಿ ನೋಡುವಿರಿ
ಹುಗ್ಗಿ ಮಾಡೊ ಸೌಟಲಿ ಹೊಡೆದರೆ
ಕುಂಯಿ ಕುಂಯಿ ರಾಗವ ಪಾಡುವಿರಿ ‖ ೨ ‖

ಹಿರಿಯ ಹಾದಿಲಿ ಓಡುವಿರಿ
ಕರೇ ಬೂದಿಯಲಿ ಹೊರಳುವಿರಿ
ಸಿರಿಕಾಗಿನೆಲೆಯಾದಿ ಕೇಶವರಾಯನ
ಸ್ಮರಿಸದವರ ಗತಿ ತೋರುವಿರಿ ‖ ೩ ‖

ಅರ್ಥ : ಕಣಕ=ಕಲಸಿದ ಹಿಟ್ಟು. ಒನಕಿ=ಒನಕೆ.

ಭಾವ : ಮನುಷ್ಯನ ಶ್ವಾನ ಸ್ವಭಾವವನ್ನು ಇಲ್ಲಿ ದಾಸರು ಚಿತ್ರವತ್ತಾಗಿ ವಿಡಂಬಿಸಿದ್ದಾರೆ.

# ತನು ನಿನ್ನದು ಜೀವನ ನಿನ್ನದೊ

ರಾಗ: ಕೇದಾರಗೌಳ, ಅಟತಾಳ

ತನು ನಿನ್ನದು ಜೀವನ ನಿನ್ನದೊ ‖ ಪ ‖
ಅನುದಿನದಲಿ ಬಾಹೊ ಸುಖದುಃಖ ನಿನ್ನದಯ್ಯ ‖ ಅ ‖

ಸವಿನುಡಿ ವೇದಪುರಾಣ ಶಾಸ್ತ್ರಗಳ
ಕಿವಿಗೊಟ್ಟು ಕೇಳುವ ಕಥೆ ನಿನ್ನದು
ನವ ಮೋಹನಾಂಗೇರ ರೂಪವ ಕಣ್ಣಲಿ
ಎವೆಯಿಕ್ಕದೆ ನೋಡುವ ನೋಟ ನಿನ್ನದಯ್ಯ ‖ ೧ ‖

ಒಡಗೂಡಿ ಗಂಧ ಕಸ್ತೂರಿ ಪರಿಮಳಂಗಳ
ಬಿಡದೆ ಲೇಪಿಸಿಕೊಂಬುವದು ನಿನ್ನದು
ಷಡುರಸದನ್ನಕ್ಕೆ ನಲಿದಾಡುವ ಜಿಹ್ವೆ
ಕಡು ರುಚಿಗೊಂಡರೆ ಆ ರುಚಿ ನಿನ್ನದಯ್ಯ ‖ ೨ ‖

ಮಾಯಾಪಾಶದ ಬಲೆಯೊಳಗೆ ಸಿಲುಕಿರುವಂಥ
ಕಾಯ ಪಂಚೇಂದ್ರಿಯಂಗಳು ನಿನ್ನವು
ಕಾಯಜಪಿತ ಕಾಗಿನೆಲೆಯಾದಿ ಕೇಶವ
ರಾಯ ನೀನಲ್ಲದೆ ನರರು ಸ್ವತಂತ್ರರೆ ‖ ೩ ‖

ಅರ್ಥ : ಅನುದಿನ=ಪ್ರತಿನಿತ್ಯ. ಬಾಹೊ=ಬರುವ. ಷಡುರಸ=ಸಿಹಿ, ಕಹಿ, ಖಾರ, ಹುಳಿ, ಉಪ್ಪು ಮತ್ತು ಒಗರು ಎಂಬ ಆರು ರಸಗಳು. ಕಾಯ=ಶರೀರ. ಪಂಚೇಂದ್ರಿಯಗಳು=ಕಣ್ಣು, ಕಿವಿ, ಮೂಗು, ನಾಲಗೆ ಮತ್ತು ಚರ್ಮ ಎಂಬ ಐದು ಜ್ಞಾನೇಂದ್ರಿಯಗಳು. ಕಾಯಜಪಿತ=ಮನ್ಮಥನ ತಂದೆಯಾದ ವಿಷ್ಣು.

ಭಾವ : ಮಾನವ ದಿನನಿತ್ಯದಲ್ಲಿ ಅನುಭವಿಸುವ ಸರ್ವ ಸುಖದುಃಖಗಳೂ ಭಗವಂತನಿಂದಲೇ ಉಂಟಾದವುಗಳು. ಅವೆಲ್ಲ ಅವನವೇ. ನಮ್ಮ ಅನುಭವವೆಂಬುದು ಕೇವಲ ನೆಪ, ಅಷ್ಟೆ. ಯಾವ ಅನುಭವಗಳಿಗೂ ಮನುಷ್ಯರು ಸ್ವತಂತ್ರರಲ್ಲ.

# ತೊರೆದು ಜೀವಿಸಬಹುದೆ

ರಾಗ: ಮುಖಾರಿ, ಏಕತಾಳ

ತೊರೆದು ಜೀವಿಸಬಹುದೆ ಹರಿ ನಿನ್ನ ಚರಣವ || ಪ ||
ಬರಿದೆ ಮಾತೇಕಿನ್ನು ಅರಿತು ಪೇಳುವೆನಯ್ಯ
ಕರಪಿಡಿದೆನ್ನನು ಕಾಯೊ ಕರುಣಾನಿಧೆ || ಅ ||

ತಾಯಿ ತಂದೆಯ ಬಿಟ್ಟು ತಪವ ಮಾಡಲುಬಹುದು
ದಾಯಾದಿ ಬಂಧುಗಳ ಬಿಡಲುಬಹುದು
ರಾಯ ಮುನಿದರೆ ರಾಜ್ಯವ ಬಿಡಬಹುದು
ಕಾಯಜಪಿತ ನಿನ್ನಡಿಯ ಬಿಡಲಾಗದು || ೧ ||

ಒಡಲು ಹಸಿದರೆ ಅನ್ನವ ಬಿಡಬಹುದು
ಪಡೆದ ಕ್ಷೇತ್ರವ ಬಿಟ್ಟು ಹೊರಡಲುಬಹುದು
ಮಡದಿ ಮಕ್ಕಳ ಕಡೆಗೆ ತೊಲಗಿಸಿ ಬಿಡಲುಬಹುದು
ಕಡಲೊಡೆಯ ನಿಮ್ಮಡಿಯ ಘಳಿಗೆ ಬಿಡಲಾಗದು || ೨ ||

ಪ್ರಾಣವ ಪರರಿಗೆ ಬೇಡಿದರೆ ಕೊಡಬಹುದು
ಮಾನಾಭಿಮಾನವ ತಗ್ಗಿಸಬಹುದು
ಪ್ರಾಣದಾಯಕನಾದ ಆದಿಕೇಶವರಾಯ
ಜಾಣ ಶ್ರೀಕೃಷ್ಣ ನಿನ್ನಡಿಯ ಬಿಡಲಾಗದು || ೩ ||

**ಅರ್ಥ :** ಬರಿದೆ=ವ್ಯರ್ಥವಾಗಿ. ಕಾಯಜಪಿತ=ಮನ್ಮಥನ ತಂದೆ, ವಿಷ್ಣು. ಕಡಲೊಡೆಯ=ಕ್ಷೀರ ಸಮುದ್ರದ ಒಡೆಯ, ವಿಷ್ಣು.

**ಭಾವ :** ಜಗತ್ತಿನಲ್ಲಿ ಏನನ್ನಾದರೂ ತ್ಯಜಿಸಿ ಮಾನವ ಬದುಕುವುದಕ್ಕೆ ಸಾಧ್ಯವಿದೆ. ಆದರೆ ಭಗವಂತನ ಪಾದಧ್ಯಾನವನ್ನು ಬಿಟ್ಟು ಬದುಕುವುದಕ್ಕೆ ಸಾಧ್ಯವಿಲ್ಲ. ದೈವದ ಬಗ್ಗೆ ಕನಕದಾಸರು ಹೊಂದಿರುವ ಅನನ್ಯ ಶರಣಾಗತ ಭಾವವನ್ನು ಇದು ಸೂಚಿಸುತ್ತದೆ.

# ಸತ್ಯವಂತರ ಸಂಗವಿರಲು

ರಾಗ: ಪೂರ್ವಿ, ರೂಪಕತಾಳ

ಸತ್ಯವಂತರ ಸಂಗವಿರಲು ತೀರ್ಥವ್ಯಾತಕೆ
ನಿತ್ಯಜ್ಞಾನಿಯಾದವೋಲೆ ಚಿಂತೆಯಾತಕೆ || ಪ ||

ತಾನು ಉಣ್ಣದೆ ಪರರಿಗಿಕ್ಕದ ಧನವಿದ್ಯಾತಕೆ
ಮಾನಹೀನವಾಗಿ ಬಾಳ್ವ ಮನುಜನೇತಕೆ
ಜ್ಞಾನವಿಲ್ಲದೆ ನೂರುಕಾಲ ಬದುಕಲ್ಯಾತಕೆ
ಮಾನಿನೀಯು ತೊರೆದ ಮೇಲೆ ಭೋಗವ್ಯಾತಕೆ || ೧ ||

ಮಾತುಕೇಳದೆ ಮಲೆತು ನಡೆವ ಮಕ್ಕಳ್ಯಾತಕೆ
ಪ್ರೀತಿಯಿಲ್ಲದೆ ಎಡೆಯಲಿಕ್ಕಿದ ಅನ್ನವ್ಯಾತಕೆ
ನೀತಿಯರಿತು ನಡೆಯದಿರುವ ಬಂಟನ್ಯಾತಕೆ
ಸೋತು ಹೆಣ್ಣಿಗೆ ಹೆದರಿ ನಡೆವ ಪುರುಷನ್ಯಾತಕೆ || ೨ ||

ಸನ್ನೆಯರಿತು ನಡೆಯದಿರುವ ಸತಿಯು ಯಾತಕೆ
ಮನ್ನಣೆಂದ ನಡೆಸದಿರುವ ದೊರೆಯು ಯಾತಕೆ
ಮುನ್ನ ಕೊಟ್ಟು ಪಡೆಯದಿನ್ನು ಬಯಸಲ್ಯಾತಕೆ
ಚೆನ್ನ ಆದಿ ಕೇಶವನಲ್ಲದ ದೈವವ್ಯಾತಕೆ || ೩ ||

ಅರ್ಥ : ಮಾನಿನಿ=ಹೆಂಡತಿ, ಸ್ತ್ರೀ. ಮಲೆತು=ಧಿಕ್ಕರಿಸಿ, ಉದ್ಧಟತನ ತೋರಿ. ಬಂಟ=ಸೇವಕ. ಮನ್ನಣೆ=ಗೌರವ.

ಭಾವ : ಧನ, ಮಾನ, ಜ್ಞಾನ, ಮಾನಿನಿ, ಮಕ್ಕಳು, ಅನ್ನ, ಬಂಟ, ದೊರೆ ಮುಂತಾದವುಗಳು ದೊರೆತರೂ ಅವು ಅಥವಾ ಅವರು ನೀತಿಯ ಪ್ರೀತಿಯ ನೆಲೆಗಟ್ಟಿನಲ್ಲಿ ಸದುಪಯೋಗಕ್ಕೆ ಬರದಿದ್ದರೆ ವ್ಯರ್ಥ. ಹಾಗೆಯೇ ಆದಿಕೇಶವನಲ್ಲದೆ ಇತರ ದೈವ ಕೂಡ ಇದ್ದೂ ವ್ಯರ್ಥ. ಆದಿಕೇಶವನ ಮೇಲೆ ದಾಸರಿಗಿರುವ ಅನನ್ಯ ನಿಷ್ಠೆಯನ್ನೂ ಮತ್ತು ಅವರ ಲೋಕಜ್ಞಾನದ ಹಿರಿಮೆಯನ್ನೂ ಇದು ಸೂಚಿಸುತ್ತದೆ.

# ಈಶ ನಿನ್ನ ಚರಣ ಭಜನೆ

ರಾಗ: ಕಲ್ಯಾಣಿ. ಆದಿತಾ

ಈಶ ನಿನ್ನ ಚರಣ ಭಜನೆ | ಆಸೆಯಿಂದ ಮಾಡುವೆನು || ಪ ||
ದೋಷ ರಾಶಿ ನಾಶ ಮಾಡು | ಶ್ರೀಶ ಕೇಶವ || ಅ ||

ಶರಣು ಹೊಕ್ಕೆನಯ್ಯ ಎನ್ನ | ಮರಣ ಸಮಯದಲ್ಲಿ ನಿನ್ನ
ಚರಣಸ್ಮರಣೆ ಕರುಣಿಸಯ್ಯ | ನಾರಾಯಣ || ೧ ||

ಶೋಧಿಸೆನ್ನ ಭವದ ಕಲುಷ | ಬೋಧಿಸಯ್ಯ ಜ್ಞಾನ ಎನಗೆ
ಬಾಧಿಸುವ ಯಮನ ಬಾಧೆ | ಬಿಡಿಸು ಮಾಧವ || ೨ ||

ಹಿಂದನೇಕ ಯೋನಿಗಳಲಿ | ಬಂದು ಬಂದು ನೊಂದೆ ನಾನು
ಇಂದು ಭವದ ಬಂಧ ಬಿಡಿಸು | ತಂದೆ ಗೋವಿಂದ || ೩ ||

ಭ್ರಷ್ಟನೆನಿಸಬೇಡ ಕೃಷ್ಣ | ಇಷ್ಟು ಮಾತ್ರ ಬೇಡಿಕೊಂಬೆ
ಶಿಷ್ಟರೊಳಗೆ ಇಷ್ಟು ಕಷ್ಟ | ಬಿಡಿಸು ವಿಷ್ಣುವೆ || ೪ ||

ಮೊದಲು ನಿನ್ನ ಪಾದ ಪೂಜೆ | ಮುದದಿ ಮಾಡುವೆನು ನಾನು
ಹೃದಯದೊಳಗೆ ಒದಗಿಸಯ್ಯ | ಮಧುಸೂದನ || ೫ ||

ಕವಿದುಕೊಂಡು ಇರುವ ಪಾಪ | ಸವೆದುಹೋಗುವಂತೆ ಮಾಡಿ
ಜವನ ಬಾಧೆಯನ್ನು ಬಿಡಿಸೊ | ತ್ರಿವಿಕ್ರಮ || ೬ ||

ಕಾಮಜನಕ ನಿನ್ನ ನಾಮ | ಪ್ರೇಮದಿಂದ ಪಾಡುವಂಥ
ನೇಮ ಎನಗೆ ಪಾಲಿಸಯ್ಯ | ಸ್ವಾಮಿ ವಾಮನ || ೭ ||

ಮದನನಯ್ಯ ನಿನ್ನ ಮಹಿಮೆ | ವದನದಲ್ಲಿ ಇರುವಂತೆ
ಹೃದಯದಲ್ಲಿ ಸದನ ಮಾಡು | ಮುದದಿ ಶ್ರೀಧರ || ೮ ||

ಹುಸಿಯನಾಡಿ ಹೊಟ್ಟೆ ಹೊರೆವೆ | ವಿಷಯದಲ್ಲಿ ರಸಿಕನೆಂದು
ಹುಸಿಗೆ ಹಾಕದಿರಯ್ಯ | ಹೃಷಿಕೇಶನೆ || ೯ ||

ಬಿದ್ದು ಭವದನೇಕ ಜನುಮ | ಬದ್ಧನಾಗಿ ಕಲುಷದಿಂದ
ಗೆದ್ದುಪೋಪ ಬುದ್ಧಿ ತೋರೊ | ಪದ್ಮನಾಭನೆ || ೧೦ ||

ಕಾಮಕ್ರೋಧ ಬಿಡಿಸಿ ನಿನ್ನ | ನಾಮ ಜಿಹ್ವೆಯೊಳಗೆ ನಡೆಸು
ಶ್ರೀ ಮಹಾನುಭಾವನಾದ | ದಾಮೋದರ || ೧೧ ||

ಪಂಕಜಾಕ್ಷ ನೀನು ಎನ್ನ | ಮಂಕುಬುದ್ಧಿ ಬಿಡಿಸಿ ನಿನ್ನ
ಕಿಂಕರನ ಮಾಡಿಕೊಳ್ಳೊ | ಸಂಕರುಷಣ || ೧೨ ||

ಏಸು ಜನ್ಮ ಬಂದರೇನು | ದಾಸನಲ್ಲವೇನೊ ನಾನು
ಘಾಸಿ ಮಾಡದಿರು ಎನ್ನ | ವಾಸುದೇವನೆ || ೧೩ ||

ಬುದ್ಧಿಶೂನ್ಯನಾಗಿ ಎನ್ನಾ | ಪದ್ಧಕಾರ್ಯ ಕುಹಕ ಮನವ
ತಿದ್ದಿ ಹೃದಯ ಶುದ್ಧಿ ಮಾಡೋ | ಪ್ರದ್ಯುಮ್ನನೆ || ೧೪ ||

ಜನನಿ ಜನಕ ನೀನೆ ಎಂದು | ಎನುವೆನಯ್ಯ ದೀನಬಂಧು
ಎನಗೆ ಮುಕ್ತಿ ಪಾಲಿಸಿಂದು | ಅನಿರುದ್ಧನೆ || ೧೫ ||

ಹರುಷದಿಂದ ನಿನ್ನ ನಾಮ | ಸ್ಮರಿಸುವಂತೆ ಮಾಡು ಪ್ರೇಮ
ಇರಿಸುವರಣದಲ್ಲಿ ಕ್ಷೇಮ | ಪುರುಷೋತ್ತಮ || ೧೬ ||

ಸಾಧುಸಂಗ ಕೊಟ್ಟು ನಿನ್ನ | ಪಾದಭಜನೆ ಇತ್ತು ಎನ್ನ
ಭೇದಮಾಡಿ ನೋಡದಿರು | ಅಧೋಕ್ಷಜ || ೧೭ ||

ಚಾರುಚರಣತೋರಿ ಎನಗೆ | ಪಾರುಗಾಣಿಸಯ್ಯ ಕೊನೆಗೆ
ಭಾರಹಾಕಿರುವೆ ನಿನಗೆ | ನಾರಸಿಂಹನೆ || ೧೮ ||

ಸಂಚಿತಾರ್ಥ ಪಾಪಗಳು | ಕಿಂಚಿತಾದ ಪೀಡೆಗಳು
ಮುಂಚಿತಾಗಿ ಕಳೆದು ಪೊರೆಯೊ | ಸ್ವಾಮಿ ಅಚ್ಯುತ || ೧೯ ||

ಜ್ಞಾನಭಕ್ತಿ ಕೊಟ್ಟು ನಿನ್ನ | ಧ್ಯಾನದಲ್ಲಿ ಇಟ್ಟು ಸದಾ
ಹೀನ ಬುದ್ಧಿ ಬಿಡಿಸು ಮುನ್ನ | ಜನಾರ್ದನ || ೨೦ ||

ಜಪತಪಾನುಷ್ಠಾನವಿಲ್ಲದೆ | ಕುಪಥಗಾಮಿಯಾದ ಎನ್ನ
ಕೃಪೆಯ ಮಾಡಿ ಕ್ಷಮಿಸಬೇಕು | ಉಪೇಂದ್ರನೇ || ೨೧ ||

ಮೊರೆಯು ಇಡುವೆನಯ್ಯ ನಿನಗೆ | ಶರಧಿಶಯನ ಶುಭಮತಿಯ
ಇರಿಸೊ ಭಕ್ತನೆಂದು ಪರಮ | ಪುರುಷ ಶ್ರೀಹರೇ || ೨೨||

ಪುಟ್ಟಿಸಲು ಬೇಡ ಇನ್ನು | ಪುಟ್ಟಿಸಿದಕ್ಕೆ ಪಾಲಿಸಿನ್ನು
ಇಷ್ಟು ಬೇಡಿಕೊಂಬೆ ನಾನು | ಶ್ರೀಕೃಷ್ಣನೆ ‖ ೨೩

ಸತ್ಯವಾದ ನಾಮಗಳನು | ನಿತ್ಯದಲ್ಲಿ ಪಠಿಸುವವಗೆ
ಅರ್ತಿಯಿಂದ ಸಲಹುವ | ಕರ್ತೃ ಕೇಶವ ‖ ೨೪

ಮರೆಯದೆಲೆ ಹರಿಯನಾಮ | ಬರೆದು ಓದಿ ಕೇಳುವರ್ಗೆ
ಕರೆದು ಮುಕ್ತಿ ಕೊಡುವ ನೆಲೆ | ಯಾದಿ ಕೇಶವ ‖ ೨೫

ಅರ್ಥ : ಶ್ರೀಶ=ಲಕ್ಷ್ಮೀರಮಣ, ವಿಷ್ಣು. ಕಾಮಜನಕ=ವಿಷ್ಣು. ನೇಮ=ನಿಯಮ, ಕ್ರಮ. ಸಂಚಿತಾರ್ಥ=ಗಳಿಸಿದ ಪಾಪ. ಸದನ=ಮನೆ. ಕಿಂಕರ=ಸೇವಕ. ಸಂಕರುಷಣ=ಬಲರಾಮ. ಅಧೋಕ್ಷಜ=ವಿಷ್ಣು. ಚಾರು=ಮನೋಹರ. ಪ್ರದ್ಯುಮ್ನ=ಮನ್ಮಥ. ಉಪೇಂದ್ರ=ವಿಷ್ಣು. ಪಂಕಜಾಕ್ಷ=ವಿಷ್ಣು.

ಭಾವ : ಭಗವಂತನನ್ನು ಕುರಿತ ಭಕ್ತನ ತೀವ್ರ ಆರ್ತ ಹಂಬಲ ಇಲ್ಲಿ ಪ್ರವಾಹರೂಪಿಯಾಗಿ ಹರಿದಿದೆ.

# ಏನು ಬರುವುದೋ

ರಾಗ: ಧನ್ಯಾಸಿ, ಆದಿತಾಳ

ಏನು ಬರುವುದೋ ಸಂಗ | ಡೇನು ಬರುವುದೋ || ಪ ||
ದಾನ ಧರ್ಮ ಮಾಡಿ ಬಹು ನಿ | ಧಾನಿ ಎನಿಸಿಕೊಳ್ಳು ಮನುಜ || ಅ ||

ಹೆಂಡರಿಲ್ಲ ಮಕ್ಕಳಿಲ್ಲ ಮಂಡೆ ತುಂಬ ಬಂಧು ಬಳಗ
ಕಂಡು ಬಿಡಿಸಿಕೊಂಬರಾರೊ ದಿಂಡಿಯಮನ ದೂತರೆಳೆಯೆ
ಬಂಡಿ ತುಂಬ ಇದ್ದ ಧನವು ಹಿಂದೆ ಉಳಿವುದಲ್ಲೊ ನಿನ್ನ
ಪೊಂದಿಕೊಂಡು ಬರುವ ವಸ್ತು ಕೀರ್ತಿ ಅಪಕೀರ್ತಿ ಎರಡೆ || ೧ ||

ಎನ್ನದೆಂದು ತನ್ನದೆಂದು ಹೊನ್ನು ಹೆಣ್ಣು ಮಣ್ಣಿಗಾಗಿ
ಘನ್ನವಾಗಿ ಬಾಯ ಬಿಡುತ ಬಂದೆ ಮೋಹನಾ
ಸನ್ನುತದಲ್ಲಿ ಪರಹಿತಾರ್ಥ ಮಾಡಿ
ಪುಣ್ಯ ಪಡೆಯಿನಿತು ಮುಂದೆ ಕಿರುಕುಳದ ಕೂಪದಲ್ಲಿ
ಕೆಡಲು ಬೇಡ ಮನುಜ || ೨ ||

ಬತ್ತಲಿಂದ ಬರುತಿಹರು ಬತ್ತಲಿಂದ ಪೋಗುತಿಹರು
ಕತ್ತಲೆ ಕಾಲ ಬೆಳಕು ಮಾಡೆ ಹೊತ್ತ ಕಳೆದರು
ಸತ್ತರಿಲ್ಲ ಹೆತ್ತರಿಲ್ಲ ಹೊತ್ತುಕೊಂಡು ಹೋದರಲ್ಲೆ
ಮತ್ತೆ ದೇಹ ಮಣ್ಣುಗೂಡಿದಂತೆ ಕೆಡಲು ಬೇಡ ಮನುಜ || ೩ ||

ಕಟ್ಟಲಿಲ್ಲ ಬಿಚ್ಚಲಿಲ್ಲ ಕಷ್ಟಪಟ್ಟು ಬಾಳಲಿಲ್ಲ
ಸುಟ್ಟು ಸುಟ್ಟು ಸುಣ್ಣದರಳು ಆಯಿತೀ ಕಾಯ
ಬಿಟ್ಟು ಹೋಗುವಾಗ ಬೊಟ್ಟು ಬಟ್ಟೆ ನಿನಗೆ ಹೊಂದಲಿಲ್ಲ
ದೃಷ್ಟಿನೋಟ ಕಟ್ಟ ಕಡೆಗೆ ಬಟ್ಟಬಯಲಾಗುತಿದೆ || ೪ ||

ಗರುವದೋರಿ ನಿಂದ ನೀನು ಬರಿದೆ ಕಾಲ ಕಳೆದೆ ಮುಂ
ದರಿದು ನೋಡು ನರರತನುವು ದೊರಕಲರಿಯದು
ನೆರೆ ಮಹಾಮೂರ್ತಿ ಒಡೆಯ ಪರಮಗುರು ಚೆನ್ನಾದಿ ಕೇಶವ
ಚರಣ ಭಜಿಸಿ ಚಂಚಲವಳಿದು ವರವ ಪಡೆದು ಹೊಂದು ಮುಕುತಿ || ೫ ||

ಅರ್ಥ : ನಿಧಾನಿ=ಸಿರಿವಂತ. ದಿಂಡಿ=ಉದ್ಧಟ, ಶೂರ. ಘನ್ನ=ಅಧಿಕ. ಬೊಟ್ಟು=ಸ್ವಲ್ಪ. ಗರುವ=ಹೆಮ್ಮೆ.

ಭಾವ : ಹೆಂಡಿರು, ಮಕ್ಕಳು, ಬಂಧುಗಳು, ಹೊನ್ನು, ಮಣ್ಣು, ಯಾವುದೂ ಮನುಷ್ಯ ಸಾಯುವಾಗ ಅವನ ಸಂಗಡ ಬರುವುದಿಲ್ಲ. ಭಗವಂತನ ಧ್ಯಾನ ಮಾಡಿದರೆ ಮಾತ್ರ ಎಲ್ಲ ಚಂಚಲತೆ ವ್ಯಾಮೋಹ ನಾಶವಾಗಿ ಮಾನವನಿಗೆ ಮುಕ್ತಿ ದೊರೆಯುತ್ತದೆ.

## ಕೇಶವನೊಲುಮೆಯು ಆಗುವತನಕ

ರಾಗ: ಧನ್ಯಾಸಿ, ಅಟತಾಳ

ಕೇಶವನೊಲುಮೆಯು ಆಗುವತನಕ ಹರಿ
ದಾಸರೊಳಿರುತಿರು ಹೇ ಮನುಜ ॥ ಪ ॥

ಕ್ಲೇಶಪಾಶಂಗಳ ಹರಿದು ವಿಲಾಸದಿ
ಶ್ರೀಶನ ಸುತಿಗಳ ಪೊಗಳುತ ಮನದೊಳು ॥ ಅ ॥

ಮೋಸದಿ ಜೀವರ ಘಾಸಿ ಮಾಡಿದ ಪಾಪ
ಕಾಶಿಗೆ ಹೋದರೆ ಹೋದೀತೆ
ಶ್ರೀಶನ ಭಕುತರ ದೂಷಿಸಿದಾ ಫಲ
ಕಾಸು ಕೊಟ್ಟರೆ ಬಿಟ್ಟೀತೆ
ಭಾಷೆಯ ಕೊಟ್ಟು ನಿರಾಶೆಮಾಡಿದಾಫಲ
ಕ್ಲೇಶವಗೊಳಿಸದೆ ಇದ್ದೀತೆ
ಭೂಸುರಸ್ವವ ಹ್ರಾಸಮಾಡಿದ ಫಲ
ಏಸೇಸು ಜನುಮಕು ಬಿಟ್ಟೀತೆ ॥ ೧ ॥

ಜೀನನ ವಶದೊಳು ನಾನಾ ದ್ರವ್ಯವಿರೆ
ದಾನಧರ್ಮಕೆ ಮನಸಾದೀತೆ
ಹೀನ ಮನುಜನಿಗೆ ಜ್ಞಾನವ ಬೋಧಿಸೆ
ಹೀನ ವಿಷಯವಳಿದ್ಹೋದೀತೆ
ಮಾನಿನಿ ಮನಸು ನಿಧಾನವಿರದಿರೆ
ಮಾನಾಭಿಮಾನಗಳುಳಿದೀತೆ
ಭಾನುಪ್ರಕಾಶನ ಭಜನೆಯ ಮಾಡದ
ಹೀನಗೆ ಮುಕುತಿಯು ದೊರಕೀತೆ ॥ ೨ ॥

ಸತ್ಯಧರ್ಮಗಳ ನಿತ್ಯವು ಬೋಧಿಸೆ
ತೊತ್ತಿನ ಮನಸಿಗೆ ಸೊಗಸೀತೆ
ತತ್ತ್ವದ ಅರ್ಥ ವಿಚಿತ್ರದಿ ಪೇಳಲು
ಕತ್ತೆಯು ಚಿತ್ತಕೆ ಹತ್ತೀತೆ

ಪುತ್ಥಳಿ ಬೊಂಬೆಯು ಚಿತ್ರದಿ ಬರೆದರೆ
ಮುತ್ತನು ಕೊಟ್ಟರೆ ನುಡಿದೀತೆ
ಕತ್ತುರಿ ತಿಲಕವನೊತ್ತಿ ಫಣೆಯೊಳಿಡೆ
ಅರ್ತಿಯು ತೋರದೆ ಇದ್ದೀತೆ ॥ ೩

ನ್ಯಾಯವ ಬಿಟ್ಟನ್ಯಾಯವ ಪೇಳುವ
ನಾಯಿಗೆ ನರಕವು ತಪ್ಪೀತೆ
ತಾಯಿ ತಂದೆಗಳ ಬಲು ನೋಯಿಸಿದ
ನ್ಯಾಯಿಗೆ ಮುಕುತಿಯು ದೊರಕೀತೆ
ಬಾಯಿ ಕೊಬ್ಬಿ ಬಯ್ಯುವ ಮನುಜಗೆ
ಘಾಯವು ಆಗದೆ ಬಿಟ್ಟೀತೆ
ಮಾಯವಾದಗಳ ಬೋಧಿಪ ಮನುಜಗೆ
ಹೇಯ ನರಕವು ತಪ್ಪೀತೆ ॥ ೪

ಸಾಧು ಸಜ್ಜನರ ನೋಯಿಸಿದ ಮಾಯಾ
ವಾದಿಗೆ ನರಕವು ತಪ್ಪೀತೆ
ಬಾಧಿಸಿ ಬಡವರ ಅರ್ಥವನೊಯ್ವಗೆ
ವ್ಯಾಧಿಯು ಕಾಡದೆ ಬಿಟ್ಟೀತೆ
ಭೇದವೆಣಿಸಿ ಬಲು ಕ್ಷುದ್ರವ ಕಲಿತರೆ
ಮೋದವೆಂದಿಗು ಆದೀತೆ
ಕದ್ದು ಒಡಲ ಪೊರೆಯುವ ಮನೆಯೊಳ
ಗಿದ್ದದ್ದು ಹೋಗದೆ ಉಳಿದೀತೆ ॥ ೫ ॥

ಅಂಗಜ ವಿಷಯಗಳನು ತೊರೆದಾತಗೆ
ಅಂಗನೆಯರ ಸುಖ ಸೊಗಸೀತೆ
ಸಂಗದುಃಖಗಳ ಹಿಂಗಿದ ಮನುಜಗೆ
ಶೃಂಗಾರದ ಬಗೆ ಸೊಗಸೀತೆ
ಇಂಗಿತವರಿತ ನಿಸ್ಸಂಗಿ ಶರೀರ ವ
ಜ್ರಾಂಗಿಯಾಗದೆ ತಾನಿದ್ದೀತೆ
ಮಂಗಳ ಮಹಿಮನ ಅಂಘ್ರಿಯ ಕಾಣದ
ಮಂಗಗೆ ಮುಕುತಿಯು ದೊರಕೀತೆ ॥ ೬ ॥

ಕರುಣಾಮೃತದಾಭರಣವ ಧರಿಸಿದ
ಪರಮಗೆ ಸಿರಿಯು ತಪ್ಪೀತೆ
ಕರುಣ ಪಾಶದುರವಣೆ ತೊರೆದಾತಗೆ
ಶರಣರ ಕರುಣವು ತಪ್ಪೀತೆ
ಅರಿತು ಶಾಸ್ತ್ರವನಾಚರಿಪ ಯೋಗ್ಯಗೆ
ಗುರು ಉಪದೇಶವು ತಪ್ಪೀತೆ
ವರವೇಲಾಪುರದಾದಿ ಕೇಶವನ
ಸ್ಮರಿಸುವವನಿಗೆ ಮೋಕ್ಷತಪ್ಪೀತೆ ॥ ೭ ॥

**ಅರ್ಥ :** ಕ್ಲೇಶ=ದುಃಖ. ಶ್ರೀಶ=ವಿಷ್ಣು. ಹ್ರಾಸ=ಕಡಿ, ವಿನಾಶ. ಜೀನ=ಜಿಪುಣ. ನಿಧಾನ=ತಾಳ್ಮೆ, ಸಂಯಮ. ಪುತ್ಥಳಿ=ಗೊಂಬೆ. ವ್ಯಾಧಿ=ರೋಗ. ಮೋದ=ಸಂತೋಷ. ಅಂಗಜ=ಮನ್ಮಥ. ನಿಸ್ಸಂಗಿ=ಯಾರ ಸಹವಾಸವನ್ನೂ ಮಾಡದವನು. ವಜ್ರಾಂಗಿ=ವಜ್ರದಂತಹ ಅಂಗವುಳ್ಳವ. ಅಂಘ್ರಿ=ಪಾದ. ಕರುಣಪಾಶ=? ಉರವಣೆ=ಆತುರ, ಕೋಪ.

# ಅಹುದಾದರಹುದೆನ್ನಿ

ರಾಗ: ಮುಖಾರಿ, ಝಂಪೆತಾಳ

ಅಹುದಾದರಹುದೆನ್ನಿ ಅಲ್ಲವಾದರಲ್ಲವೆನ್ನಿ ‖ ಪ ‖
ಬಹುಜನರು ನೆರೆತಿಳಿದು ಪೇಳಿ ಮತ್ತಿದನು ‖ ಅ ‖

ದೇವರಿಲ್ಲದ ಗುಡಿಯು ಪಾಳು ಬಿದ್ದಂಗಡಿಯು
ಭಾವವಿಲ್ಲದ ಭಕುತಿ ಅದು ಕುಹಕಯುಕುತಿ
ಹೇವವಿಲ್ಲದ ಹೆಣ್ಣು ಗಜುಗ ಬೆಳೆದ ಕಣ್ಣು
ಸೇವೆಯರಿಯದ ಧಣಿಯು ಕಲ್ಲಿನಾ ಕಣಿಯು ‖ ೧ ‖

ಧರ್ಮವಿಲ್ಲದ ಅರಸು ಮುರಿದ ಕಾಲಿನ ಗೊರಸು
ನಿರ್ಮಲಿಲ್ಲದ ಮನಸು ತಾ ಕೊಳಚೆ ಹೊಲಸು
ಕರ್ಮವಿಲ್ಲದ ಗಂಡು ಕರಿಯ ಒನಕೆಯ ತುಂಡು
ಮರ್ಮವಿಲ್ಲದ ಮಾತು ಒಡಕು ಮಡಕೆಯ ತೂತು ‖ ೨ ‖

ಮಕ್ಕಳಿಲ್ಲದ ಸಿರಿಯು ಕೊಳೆತ ತೆಂಗಿನ ತುರಿಯು
ಸೌಖ್ಯವಿಲ್ಲದ ಊಟ ಅದು ಕಾಳಕೂಟ
ಒಕ್ಕಲಿಲ್ಲದ ಊರು ಕೊಳೆತು ನಾರುವ ನೀರು
ಸೊಕ್ಕಿ ನಡೆಯುವ ಭೃತ್ಯ ಅವ ಕ್ರೂರಕೃತ್ಯ ‖ ೩ ‖

ಕಂಡು ಕರೆಯದ ನಂಟ ಮೊನೆಯು ಕೆಟ್ಟಿಹ ಕಂಟ
ಉಂಡು ನಗದಿಹ ಮೋರೆ ಅದು ಕಹಿಯ ಸೋರೆ
ದಂಡಿಗಂಜುವ ಬಂಟ ಒಡಕು ಹರವಿಯ ಕಂಠ
ಗಂಡಗಂಜದ ನಾರಿ ಅವಳೆ ಹೆಮ್ಮಾರಿ ‖ ೪ ‖

ಬಿಟ್ಟು ನಡೆಯುವ ಗೆಣೆಯು ಹರಕು ತೊಗಲಿನ ಮಿಣೆಯು
ಕೊಟ್ಟು ಕೇಳುವ ದಾತ ಅವ ಹೀನಜಾತ
ಸೃಷ್ಟಿಯೊಳು ಕಾಗಿನೆಲೆಯಾದಿ ಕೇಶವನಂಘ್ರಿ
ಮುಟ್ಟಿ ಭಜಿಸದ ನರನು ಅವನೆ ವಾನರನು ‖ ೫ ‖

**ಅರ್ಥ:** ಹೇವ=ನಾಚಿಕೆ. ಗಜುಗ=ಗ್ರಂಥಿ. ಕಣಿ=ಗಣಿ. ಕಾಳಕೂಟ=ವಿಷ. ಕಂಟ=ಲೇಖನಿ. ಗೆಣೆಯು=ಸ್ನೇಹ. ದಾತ=ದಾನಿ. ಮಿಣೆ=ಹಗ್ಗ.

# ಕಂಡೆ ನಾ ತಂಡತಂಡದ ಹಿಂಡುದೈವ

ರಾಗ : ನಾಟಿ, ಝಂಪೆತಾಳ

ಕಂಡೆ ನಾ ತಂಡತಂಡದ ಹಿಂಡುದೈವ ಪ್ರಚಂಡ ರಿಪು
ಗಂಡ ಉದ್ದಂಡ ನರಸಿಂಹನ ಕಂಡೆನಯ್ಯ ॥ ಪ ॥

ಘುಡಿಘುಡಿಸಿ ಕಂಬದಲ್ಲಿ ಧಡಧಡ ಸಿಡಿಲು ಸಿಡಿಯೆ
ಕಿಡಿಕಿಡಿಸೆ ನುಡಿಯುಡಗಲೊಡನೆ ಮುಡಿವಿಡಿದು
ಘಡಘಡನೆ ನಡುನಡುಗೆ ಘುಡಿಘುಡಿಸಿ ಸಭೆ ಬೆದರೆ
ಹಿಡಿಹಿಡಿದು ಹಿರಣ್ಯಕನ ತೊಡೆಯೊಳಿಡೆ ಕೆಡಹಿದನ ॥ ೧ ॥

ಉರದೊಳಪ್ಪಳಿಸಿ ಅರಿ ಬಸಿರ ಸರಸರನೆ ಸೀಳಿ
ಪರಿಪರಿಯಲಿ ಚರ್ಮ ಎಳೆದಯೆಳೆಯೆಲುವನರ
ನರಕನೆ ನೆಗೆದು ನಿರ್ಗಳಿತ ಶೋಣಿತ ಸುರಿಯೆ
ಹರಿಹರಿದು ಕರುಳ ಕೊರಳೊಳಿಟ್ಟವನ ॥ ೨ ॥

ಪುರಜನರು ಹಾಯೆಂದು ಸುರರು ಹೂಮಳೆಗರೆಯೆ
ತರತರದಿ ವಾದ್ಯಸಂಭ್ರಮಗಳಿಂದ
ಹರಿಹರಿ ಶರಣೆಂದು ಸ್ತುತಿಸಿ ಶಿಶು ಮೆರೆಯೆ
ಕರುಣಾಳು ಕಾಗಿನೆಲೆಯಾದಿ ಕೇಶವನ ॥ ೩ ॥

ಅರ್ಥ : ರಿಪು=ಶತ್ರು. ಉದ್ದಂಡ=ಭೀಕರ. ಉರ=ಎದೆ. ಅರಿ=ಶತ್ರು. ನಿರ್ಗಳಿತ=ಸೋರಿದ. ಶೋಣಿತ=ರಕ್ತ. ಶಿಶು=ಪ್ರಹ್ಲಾದ.

ಭಾವ : ವಿಷ್ಣು ನರಸಿಂಹಾವತಾರನನ್ನೆತ್ತಿ ಹಿರಣ್ಯಕಶಿಪುವನ್ನು ಕೊಂದು ಪ್ರಹ್ಲಾದನನ್ನು ಅನುಗ್ರಹಿಸಿದ ಸಂಗತಿಯು ಸಚಿತ್ರ ಸಶಕ್ತ ವರ್ಣನೆಯಿದೆ.

# ಆರು ಬದುಕಿದರಯ್ಯ

ರಾಗ: ಮುಖಾರಿ, ತ್ರಿಪುಟತಾಳ

ಆರು ಬದುಕಿದರಯ್ಯ ಹರಿ ನಿನ್ನ ನಂಬಿ || ಪ ||
ತೋರು ಈ ಧರೆಯೊಳಗೆ ಒಬ್ಬರನು ಕಾಣೆ ಕೃಷ್ಣ || ಅ ||

ಕಲಹ ಬಾರದ ಮುನ್ನ ಕರ್ಣನೊಬ್ಬನ ಕೊಂದೆ
ಸುಲಭದಲಿ ಕೌರವರ ಮನೆಯ ಮುರಿದೆ
ನೆಲನ ಬೇಡಲು ಹೋಗಿ ಬಲಿಯ ಭೂಮಿಗೆ ತುಳಿದೆ
ಮೊಲೆಯನುಣ್ಣಲು ಪೋಗಿ ಪೂತನಿಯ ಕೊಂದೆ || ೧ ||

ಕರುಳೊಳಗೆ ಕತ್ತರಿಯನಿಟ್ಟು ಹಂಸಧ್ವಜನ
ಸರಸದಿಂ ಮಗಳ ಗಂಡನ ಕೊಲಿಸಿದೆ
ಮರುಳಿನಿಂದಲಿ ಪೋಗಿ ಭೃಗಮುನಿಯ ಕಣ್ಣೊಡೆದೆ
ಅರಿತು ನರಕಾಸುರನ ಹೆಂಡತಿಯ ತಂದೆ || ೨ ||

ತಿರಿದುಂಬ ದಾಸರ ಕೈಯ ಕಪ್ಪವ ಕಟ್ಟಿಸಿಕೊಂಡೆ
ತಿರುಮಲಾಚಾರ್ಯ ಶ್ರೀಗುರವೆ ಬಲ್ಲ
ವರ ಕಾಗಿನೆಲೆಯಾದಿ ಕೇಶವನ ಭಜಿಸಿದರೆ
ತಿರಿವೆನೆಂದರೆ ತಿರುಪೆ ಕೊಳ್ಪುಟ್ಟದೈ ಕೃಷ್ಣ || ೩ ||

ಅರ್ಥ: ಮಗಳ ಗಂಡ=ಶಶಿರೇಖೆಯ ಪತಿ, ಅಭಿಮನ್ಯು.

ಭಾವ: ಹರಿಯ ಪರಮ ಭಕ್ತರಾದ ದಾಸರು, ಆತನು ಮಾಡಿದ ವಿವಾದಾಸ್ಪದ ಕೃತ್ಯಗಳನ್ನೆಲ್ಲ ಒಂದೊಂದಾಗಿ ಬಯಲಿಗೆಳೆಯುತ್ತ, ಅಂಥವನನ್ನು ನಂಬಿ ಬದುಕುವುದುಸ್ಸಾಧ್ಯವೇ ಎಂದು ಅವನಿಗೇ ಸವಾಲೆಸೆಯುವ ದಿಟ್ಟತನವನ್ನು ಮೆರೆಯುತ್ತಾರೆ. ನಾಸ್ತಿಕತೆಯಂತೆ ಗೋಚರವಾದರೂ ಇದೊಂದು ಬಗೆಯ ನಿಂದಾಸ್ತುತಿ.

## ದಾನಧರ್ಮವ ಮಾಡಿ ಸುಖಿಯಾಗು ಮನವೆ

ರಾಗ : ಕೇದಾರಗೌಳ, ಅಟತಾಳ

ದಾನಧರ್ಮವ ಮಾಡಿ ಸುಖಿಯಾಗು ಮನವೆ || ಪ ||
ಹೀನವೃತ್ತಿಯಲಿ ನೀ ಕೆಡಬೇಡ ಮನವೆ || ಅ ||

ಎಕ್ಕನಾತಿ ಎಲ್ಲಮ್ಮ ಮಾರಿ ದುರ್ಗಿಯು ಚೌಡಿ
ಅಕ್ಕರಿಯಿಂದಲಿ ಪೂಜೆ ಮಾಡಲೇಕೆ
ಕಿಕ್ಕಿರಿದು ಯಮನ ದೂತರೆಳೆದೊಯ್ವಾಗ
ಶಕ್ತೇರು ಬಿಡಿಸಿಕೊಂಡಾರೇನೊ ಮರುಳೆ || ೧ ||

ಸಂಭ್ರಮದಲೊಂದ್ಹೊತ್ತು ನೇಮದಲಿದ್ದು
ತಂಬಿಟ್ಟನಾ ದೀಪ ಹೊರಲೇತಕೆ
ಕೊಂಬು ಹೋತು ಕುರಿ ಕೋಣನಾ ಬಲಿಗೊಂಬ
ಡೊಂಬಿ ದೈವಗಳ ಭಜಿಸದಿರು ಮನವೆ || ೨ ||

ಚಿಗುರೆಲೆ ಬೇವಿನ ಸೊಪ್ಪು ನಾರಸೀರೆ
ಬಗೆಬಗೆಯಿಂದ ಶೃಂಗಾರ ಮಾಡಿ
ನೆಗೆನೆಗೆದು ಆಡಲು ಕುಣಿಯಲು ನಿನಗಿನ್ನು
ಮಿಗಿಲಾದ ಮುಕುತಿಯುಂಟೇ ಹುಚ್ಚು ಮನವೆ || ೩ ||

ದಾನಧರ್ಮ ಪರೋಪಕಾರವ ಮಾಡು
ದೀನನಾಗಿ ನೀ ಕೆಡಬೇಡವೊ
ಜ್ಞಾನವಿಲ್ಲದೆ ಹೀನ ದೈವವ ಭಜಿಸಲು
ಏನುಂಟು ನಿನಗಿನ್ನು ಎಲೆ ಹುಚ್ಚು ಮನವೆ || ೪ ||

ನರಲೋಕದಿ ಯಮನ ಬಾಧೆಯು ಕಳೆಯಲು
ವರಪುಣ್ಯ ಕಥೆಗಳ ಕೇಳುತಲಿ
ಸಿರಿಯಾದಿಕೇಶವರಾಯನ ನೆರೆ ನಂಬಿ
ಸ್ಥಿರವಾದ ಪದವಿಯ ಪಡೆ ಹುಚ್ಚು ಮನವೆ || ೫ ||

ಅರ್ಥ : ಶಕ್ತೇರು=ಶಕ್ತಿದೇವತೆಯರು. ಡೊಂಬಿ=ಗುಂಪು, ಹುಂಡು.

ಭಾವ : ಕ್ಷುದ್ರ ದೇವತೆಗಳ ಆರಾಧನೆಯನ್ನು ತೊರೆದು, ಮೂಢನಂಬಿಕೆಯ ಬಲಿ ನೈವೆ
ಮುಂತಾದುವುಗಳನ್ನು ಕೈಬಿಟ್ಟು, ಆದಿಕೇಶವನನ್ನು ಮಾತ್ರ ನಿಚ್ಚಳವಾಗಿ ಸ
ಮುಕ್ತಿಯನ್ನು ಪಡೆಯಬೇಕು ಎಂದು ದಾಸರು ಸಾರಿದ್ದಾರೆ ಇಲ್ಲಿ.

# ಬಂದೆವಯ್ಯ ಗೋವಿಂದಸೆಟ್ಟಿ

ರಾಗ : **ಪೂರ್ವಿ, ಅಟತಾಳ**

ಬಂದೆವಯ್ಯ ಗೋವಿಂದಸೆಟ್ಟಿ ನಿನ್ನ
ಹರಿವಾಣತೀರ್ಥ ಪ್ರಸಾದ ಉಂಟೆನಲಾಗಿ ॥ ಪ ॥

ಅಪ್ಪವು ಅತಿರಸ ತುಪ್ಪವು ಚಿನಿಪಾಲು
ಒಪ್ಪುವ ಸಕ್ಕರೆ ಯಾಲಕ್ಕಿಯು
ಅಪರೂಪವಾದ ಕಜ್ಜಾಯರಾಶಿಗಳನ್ನೆಲ್ಲ
ಛಪ್ಪನ್ನ ದೇಶಕೆ ಮಾರುವಸೆಟ್ಟಿ ॥ ೧ ॥

ಒಡೆದ ಮಡಕೆ ತಂದು ಅರೆದು ನಾಮವ ಮಾಡಿ
ಕೊಡುವೆ ನೀ ಕಾಸಿಗೆ ಒಂದೊಂದನು
ಒಡಲು ತುಂಬಿ ಮಿಕ್ಕ ಅನ್ನವ ಮಾರಿಸಿ
ಒಡವೆಯ ಗಳಿಸುವ ಕಡುಲೋಭಿಸೆಟ್ಟಿ ॥ ೨ ॥

ಶೇಷಗಿರಿಯಲ್ಲಿ ವಾಸಮಾಡಿಕೊಂಡು
ದೇಶದೇಶಕ್ಕೆ ಹೆಸರಾದ ಸೆಟ್ಟಿ
ಕಾಸುಕಾಸಿಗೆ ಬಡ್ಡಿ ಗಳಿಸಿಕೊಂಬ ಆದಿ
ಕೇಶವ ನಾರಾಯಣ ತಿಮ್ಮಸೆಟ್ಟಿ ॥ ೩ ॥

ಅರ್ಥ : ಅಪ್ಪ=ಒಂದು ಬಗೆಯ ತಿನಿಸು. ಅತಿರಸ=ಸಿಹಿ ತಿನಿಸು. ಚಿನಿಪಾಲು=ಕಾಯಿಸಿದ ಹಾಲು. ಛಪ್ಪನ್ನ=ಐವತ್ತಾರು. ಶೇಷಗಿರಿ=ತಿರುಪತಿಬೆಟ್ಟ.

ಭಾವ : ತಿರುಪತಿಯ ವೆಂಕಟರಮಣನನ್ನು ಕುರಿತು ದಾಸರು ಇಲ್ಲಿ ಪರಿಹಾಸ ಮಾಡಿದ್ದಾರೆ. ದಾಸರ ಹಾಸ್ಯಪ್ರಜ್ಞೆಯ ದ್ಯೋತಕ ಇದು.

# ಕಷ್ಟಪಟ್ಟರೂ ಇಲ್ಲ

ರಾಗ : ಮುಖಾರಿ, ಝಂಪೆತಾಳ

ಕಷ್ಟಪಟ್ಟರೂ ಇಲ್ಲ ಕಳವಳಿಸಿದರಿಲ್ಲ
ಭ್ರಷ್ಟಮಾನವ ಹಣೆಯಬರಹವಲ್ಲದೆ ಇಲ್ಲ || ಪ ||

ಸಿರಿವಂತನ ಸ್ನೇಹ ಮಾಡಿ ನಡೆದರಿಲ್ಲ
ಪರಿಪರಿಯಲಿ ವಿದ್ಯೆ ಕಲಿತರಿಲ್ಲ
ನರಿಯಬುದ್ಧಿಯಲಿ ನಡೆದುಕೊಂಡರು ಇಲ್ಲ
ಅರಿಯದೆ ಹಲವ ಹಂಬಲಿಸಿದರಿಲ್ಲ || ೧ ||

ಕೊಂಡೆಗಾರಿಕೆಯನ್ನು ಹೇಳಿ ನಡೆದರಿಲ್ಲ
ಕಂಡಕಂಡವರಿಗೆ ಕೈಮುಗಿದರಿಲ್ಲ
ಗಂಡುಗತ್ತರಿಯನ್ನು ಕೊರಳಿಗಿಟ್ಟರು ಇಲ್ಲ ಪ್ರ
ಚಂಡನಾದರೂ ಇಲ್ಲ ಪರಿಹಾಸ್ಯವಲ್ಲ || ೨ ||

ಕಟ್ಟಾಳು ಕಡುಜಾಣನಾಗಿ ಪುಟ್ಟಿದರಿಲ್ಲ
ಬೆಟ್ಟಗಳನು ಕಿತ್ತಿ ಇಟ್ಟರಿಲ್ಲ
ಸೃಷ್ಟಿಯೊಳು ಕಾಗಿನಲೆಯಾದಿಕೇಶವರಾಯ
ಕೊಟ್ಟವರಿಗೆ ಉಂಟು ಕೊಡದವರಿಗೆ ಇಲ್ಲ || ೩ ||

ಅರ್ಥ : ಕೊಂಡೆಗಾರಿಕೆ=ಚಾಡಿ ಹೇಳುವಿಕೆ. ಗಂಡುಕತ್ತರಿ=ಕತ್ತು ಕತ್ತರಿಸುವ ಕತ್ತರಿ. ಕಟ್ಟಾಳು=ಶೂರ.

ಭಾವ : ಮಾನವ ಪ್ರಯತ್ನಕ್ಕೆ ಮಿತಿಯುಂಟು. ಆತ ಎಷ್ಟೇ ಪ್ರಯತ್ನ ಮಾಡಿದರೂ ದೇವರು ಒಲಿದಲ್ಲದೆ ಯಾವ ಫಲವೂ ಕೈಗೊಡುವುದಿಲ್ಲ. ಹಣೆಯಬರಹ ಮತ್ತು ದೈವವಾದಗಳನ್ನು ಪ್ರತಿಪಾದಿಸುವ ಹಾಡು ಇದು.

# ದುರ್ಜನರ ಸಂಗ ಎಂದಿಗೊಲ್ಲೆನು ಹರಿಯೆ

ರಾಗ : ಕೇದಾರಗೌಳ, ಝಂಪೆತಾಳ

ದುರ್ಜನರ ಸಂಗ ಎಂದಿಗೊಲ್ಲೆನು ಹರಿಯೆ | ಇಂಥ || ಪ ||
ಸಜ್ಜನರ ಸಂಗದೊಳಗಿರಿಸೆನ್ನ ರಂಗ || ಅ ||

ಉಂಡ ಮನೆಗೆರಡ ಎಣಿಸುವಾತನ ಸಂಗ
ಕೊಂಡೆಯುವ ಪೇಳಿ ಕಾದಿಸುವನ ಸಂಗ
ತಂದೆ ತಾಯನು ಬೈದು ಜರಿದು ಬಾಧಿಸುವನ ಸಂಗ
ನಿಂದಕರ ಸಂಗ ಬಹುಭಂಗ ರಂಗ || ೧ ||

ನಂಬಿದ ಠಾವಿನಲಿ ಕೇಡನೆಣಿಪನ ಸಂಗ
ಸಂಭ್ರಮದಿ ಜಗಳ ಕಾಯುವನ ಸಂಗ
ಹಂಬಲಿಸಿ ಭವದ ಸುಖ ಮೆಚ್ಚಿದಾಶನ ಸಂಗ
ರಂಭೆ ಸ್ತ್ರೀಯರ ನೋಡಿ ಮೋಹಿಪನ ಸಂಗ || ೨ ||

ಕುಳಿತಿಹ ಸಭೆಯೊಳು ಕುಹಕ ಮಾಡ್ವನ ಸಂಗ
ಬಲುಬೇಡೆ ಕೊಡದಿಹ ಲೋಭಿ ಸಂಗ
ಕುಲಹೀನರ ಕೂಡೆ ಸ್ನೇಹ ಬೆಳಪನ ಸಂಗ
ಹಲವು ಮಾತಾಡಿ ಆಚರಿಸಿದವನ ಸಂಗ || ೩ ||

ಗುರುಸತಿಗೆ ಪರಸತಿಗೆ ಎರಡು ಎಣಿಪನ ಸಂಗ
ಗುರುನಿಂದೆ ಪರನಿಂದೆ ಮಾಳ್ಪನ ಸಂಗ
ಪರಹಿತಾರ್ಥದ ಧರ್ಮ ಪಡೆಯದಾತನ ಸಂಗ | ಇಂಥ
ಪರಮ ಪಾಮರರ ಸಂಗ ಬಹುಭಂಗ ರಂಗ || ೪ ||

ಆಗಮ ಮಹಾತ್ಮೆಯನು ಅರಿಯದಾತನ ಸಂಗ
ಯೋಗಿಜನ ಗುರುಗಳನು ನಿಂದಿಪನ ಸಂಗ
ರಾಗದ್ವೇಷಾದಿಯಲಿ ಮುಣುಗೇಳುವನ ಸಂಗ
ಕಾಗಿನೆಲೆಯಾದಿ ಕೇಶವ ಬಿಡಿಸೀ ಭಂಗ || ೫ ||

ಅರ್ಥ : ಕೊಂಡೆಯ=ಚಾಡಿ. ಠಾವು=ಸ್ಥಳ. ಪಾಮರ=ಅಜ್ಞಾನಿ, ಅಸಂಸ್ಕೃತ. ಆಗಮ=ಜ್ಞಾನ, ಶಾಸ್ತ್ರ. ಭಂಗ=ಅವಮಾನ, ಕಷ್ಟ.

ಭಾವ : ದುರ್ಜನರು ಯಾರು ಯಾರು, ಅವರ ಲಕ್ಷಣಗಳೇನು ಎಂದು ವಿವರಿಸುತ್ತ ಅಂಥವರ ಸಂಗದಿಂದ ದೂರಪಿರಿಸು ಎಂದು ಭಗವಂತನಿಗೆ ಮೊರೆಯಿಡುತ್ತಾರೆ ದಾಸರು.

# ಅಜ್ಞಾನಿಗಳ ಕೂಡೆ ಅಧಿಕ ಸ್ನೇಹ

ರಾಗ : ಕಾಂಬೋದಿ, ಝಂಪೆತಾ

ಅಜ್ಞಾನಿಗಳ ಕೂಡೆ ಅಧಿಕ ಸ್ನೇಹಕ್ಕಿಂತ
ಸುಜ್ಞಾನಿಗಳ ಕೂಡೆ ಜಗಳವೇ ಲೇಸು ||ಪ||

ಉಂಬುಡುವುದಕ್ಕಿಲ್ಲದರಸಿನೋಲಗಕ್ಕಿಂತ
ತುಂಬಿದೂರೊಳಗೆ ತಿರಿದುಂಬುವುದೆ ಲೇಸು
ಹಂಬಲಿಸಿ ಹಾಳ್ಹರಟೆ ಹೊಡೆವುದಕಿಂತ ಹರಿ
ಯೆಂಬ ದಾಸರ ಕೂಡೆ ಸಂಭಾಷಣೆಯೆ ಲೇಸು ||೧||

ಒಡನೆ ಹಂಗಿಸುವನೋಗರವನುಂಬುವುದಕಿಂತ
ಕುಡಿನೀರು ಕುಡಿದುಕೊಂಡಿರುವುದೇ ಲೇಸು
ಬಿಡದೆ ಬಾಂಧವರೊಡನೆ ಕಡಿದಾಡುವುದಕಿಂತ
ಅಡವಿಯೊಳಗಜ್ಞಾತವಾಸವೇ ಲೇಸು ||೨||

ಮಸೆಯುತಿಹ ಮತ್ಸರದ ನೆರೆಯೊಳಿರುವುದಕಿಂತ
ಹಸನಿಲ್ಲದ ಹಾಳುಗುಡಿಯೆ ಲೇಸು
ಬಿಸಜಾಕ್ಷ ಕಾಗಿನೆಲೆಯಾದಿ ಕೇಶವರಾಯ
ವಸುಮತಿಯೊಳು ನಿನ್ನ ದಾಸತ್ವವೇ ಲೇಸು ||೩||

ಅರ್ಥ : ಓಗರ=ಅನ್ನ. ಬಿಸಜಾಕ್ಷ=ಕಮಲದಂಥ ಕಣ್ಣುಳ್ಳವನು. ವಸುಮತಿ=ಭೂಮಿ.

# ಸಾಕು ಸಾಕು ಮನುಜಸೇವೆಯು

ರಾಗ: ಪಂತುವರಾಳಿ, ರೂಪಕತಾಳ

ಸಾಕು ಸಾಕು ಮನುಜಸೇವೆಯು ರಂಗಯ್ಯ ಇನ್ನು ‖ ಪ ‖

ಸಾಕು ಸಾಕು ಮನುಜಸೇವೆ ಮಾಡಿ ದಣಿದು ನೊಂದೆ ನಾನು
ಬೇಕು ನಿನ್ನ ಪಾದ ಭಜನೆ ಲೋಕದೊಡೆಯ ರಂಗರಾಯ ‖ ಅ ‖

ಹೊತ್ತರೆದ್ದು ಪೋಗಿ ಪರರ ಚಿತ್ತವೃತ್ತಿಯನ್ನೆ ಅರಿತು
ನಿತ್ಯದಲ್ಲಿ ಹಲವು ಕೆಲಸ ಭೃತ್ಯನಂತೆ ಮಾಡಿ ರಿಕ್ತ
ಹಸ್ತದಿಂದ ಮನೆಗೆ ಸೇರುವೆ | ಆಸೆಗಾಗಿ
ಮತ್ತೆ ಕಂಡ ಕಡೆಗೆ ತೊಲಗುವೆ | ಬಂದು ಅಪರ
ರಾತ್ರೆಯಲಿ ತಿಂದು ಒರಗುವೆ | ರಂಗಯ್ಯ ರಂಗ ‖ ೧ ‖

ಸ್ನಾನ ಮೌನ ನಿತ್ಯ ಸಂಧ್ಯಾ ನೇಮಗಳನೆ ತೊರೆದು
ಹೀನನಾಗಿ ಕೆಟ್ಟ ಜನರ ಮನೆಗಳನ್ನು ತಿರುಗಿ ತಿರುಗಿ
ಶ್ವಾನನಂತೆ ದಿನವ ಕಳೆವೆನೊ | ದುರಾಸೆಯನ್ನು
ಮನದಲಿಟ್ಟುಕೊಂಡು ಕುದಿವೆನೊ | ಕೊನೆಗೂ ಎಳ್ಳು ಕಾ
ಳನಷ್ಟು ಸುಖವ ಕಾಣೆನೋ | ರಂಗಯ್ಯ ರಂಗ ‖ ೨ ‖

ಒಡಲಿನಾಸೆಗಾಗಿ ನೊಣವು ತುಡುಕಿ ಬಿದ್ದು ಜೇನಿನೊಳಗೆ
ಮಿಡುಕುವಂತೆ ಬಾಯ ಬಿಡುವೆ ಬಿಸರುಹಾಕ್ಷನೆ
ಬಿಡಿಸೊ ಎನ್ನ ಬಂಧಪಾಶವಾ | ಕಾಗಿನೆಲೆಯಾದಿಕೇಶವಾ
ಕೊಡಿಸೊ ನಿನ್ನ ಭಕ್ತರ ಸಂಗವ
ಒಡೆಯ ವೆಂಕಟಾದ್ರಿ ಮಾಧವ | ರಂಗಯ್ಯ ರಂಗ ‖ ೩ ‖

ರ್ಥ: ಹೊತ್ತರೆ=ಬೆಳಿಗ್ಗೆ. ಚಿತ್ತವೃತ್ತಿ=ಮನೋಧರ್ಮ. ಭೃತ್ಯ=ಸೇವಕ. ರಿಕ್ತಹಸ್ತ=ಬರಿಗೈ. ಅಪರರಾತ್ರೆ=ಮಧ್ಯರಾತ್ರಿ ಕಳೆದಮೇಲೆ. ಬಿಸರುಹಾಕ್ಷ=ವಿಷ್ಣು. ವೆಂಕಟಾದ್ರಿ=ತಿರುಪತಿ ಬೆಟ್ಟ.

ಾವ; ಮನುಷ್ಯಸೇವೆಯನ್ನು ಮಾಡಿ ಮಾಡಿ, ದಿನನಿತ್ಯದ ಬದುಕಿನ ಸುಖಕ್ಕಾಗಿ ಹೆಣಗಿ ಹೆಣಗಿ, ಯಾವ ಸಂತೋಷ ಶಾಂತಿಗಳೂ ಇಲ್ಲದೆ ತನ್ನ ಬಾಳು ವ್ಯರ್ಥವಾಯಿತು ಎಂಬ ಪಶ್ಚಾತ್ತಾಪದ ಕುದಿತದಿಂದ ತುಡಿಯುವ ಭಕ್ತಜೀವ ತನ್ನ ಇಹದ ಬಂಧನವನ್ನು ಬಿಡಿಸಿ ತನಗೆ ಭಕ್ತರ ಸಂಗವನ್ನು ಮತ್ತು ಭಗವಂತನ ಪಾದಧ್ಯಾನವನ್ನು ಕರುಣಿಸು ಎಂದು ಬೇಡುವ ಚಿತ್ರ ಇದು.

# ನಾನು ನೀನು ಎನ್ನದಿರೊ

ರಾಗ: ಪೀಲು, ಮಟ್ಟೆತಾ

ನಾನು ನೀನು ಎನ್ನದಿರೊ ಹೀನ ಮಾನವ ||ಪ||
ಜ್ಞಾನದಿಂದ ನಿನ್ನ ನೀನೆ ತಿಳಿದು ನೋಡೆಲೊ ||ಅ||

ಹೊನ್ನು ಹೆಣ್ಣು ಮಣ್ಣು ಮೂರು ನಿನ್ನದೇನೆಲೊ
ಅನ್ನದಿಂದ ಬಂದ ಕಾಮ ನಿನ್ನದೇನೆಲೊ
ಕರ್ಣದಿಂದ ಬರುವ ಘೋಷ ನಿನ್ನದೇನೆಲೊ
ನಿನ್ನ ಬಿಟ್ಟು ಪೋಪ ದೇಹ ನಿನ್ನದೇನೆಲೊ ||೧||

ಹಲವು ಜನ್ಮದಿಂದ ಬಂದಿರುವೆ ನೀನೆಲೊ
ಮಲದ ಗರ್ಭದಲಿ ನಿಂದಿರುವೆ ನೀನೆಲೊ
ಜಲದ ದಾರಿಯಲಿ ಬಂದಿರುವೆ ನೀನೆಲೊ
ಕುಲವು ಜಾತಿ ಗೋತ್ರವುಳ್ಳವನು ನೀನೆಲೊ ||೨||

ಕಾಲಕರ್ಮ ಶೀಲ ನೇಮ ನಿನ್ನದೇನೆಲೊ
ಜಾಲವಿದ್ಯೆ ಬಯಲ ಮಾಯೆ ನಿನ್ನದೇನೆಲೊ
ಕೀಲು ಜಡಿದ ತೊಗಲಗೊಂಬೆ ನಿನ್ನದೇನೆಲೊ
ಲೋಲ ಆದಿಕೇಶವನ ಭಕ್ತನಾಗೆಲೊ ||೩||

**ಅರ್ಥ:** ಕರ್ಣ=ಕಿವಿ. ಘೋಷ=ಶಬ್ದ. ಜಾಲವಿದ್ಯೆ=ಇಂದ್ರಜಾಲ.

**ಭಾವ:** ನಾನು ನೀನು ಎಂಬ ಮೋಹ ಮಮಕಾರಗಳಿಂದ ಮಾನವ ಮೆರೆಯುತ್ತಾನೆ. ಆದರೆ ಹೊನ್ನು ಹೆಣ್ಣು ಮಣ್ಣುಗಳಾಗಲಿ, ಕಾಮ ಶಬ್ದ ದೇಹಗಳಾಗಲಿ, ಕಾಲ ಶೀಲ ಕರ್ಮಗಳಾಗಲಿ ವಾಸ್ತವವಾಗಿ ಅವನವಲ್ಲ. ಅವನು ಕೇವಲ ತೊಗಲಗೊಂಬೆಯಂತೆ, ಭಗವಂತನಿಂದ ಆಡಿಸಲ್ಪಡುವವನು. ಆದ್ದರಿಂದ ಮನುಷ್ಯ ಈ ಅಹಂಕಾರಗಳನ್ನು ತೊರೆದು ಭಗವಂತನ ಭಕ್ತನಾಗಬೇಕು.

## ಯಾತರವನೆಂದುಸಿರಲಿ

ರಾಗ: ಪೂರ್ವಿ, ಅಟತಾಳ

ಯಾತರವನೆಂದುಸಿರಲಿ | ಜಗ
ನ್ನಾಥ ಮಾಡಿದನೊಂದನರರೂಪವಯ್ಯ || ಪ ||

ಇಂದ್ರಿಯ ಸೂತಕ ದುರ್ಗಂಧ ಮಲಮೂತ್ರ
ಬಂದ ಠಾವಿನ ನಿಜಗುರುತನರಿಯೆ
ಬಂದದ್ದು ಬಚ್ಚಲಗುಣಿ ತಿಂದದ್ದು ಮೊಲೆ ಮಾಂಸ
ಅಂಧಕ ತನಗಿನ್ಯಾತರ ಕುಲವಯ್ಯ || ೧ ||

ಒಂಬತ್ತು ರಂಧ್ರದೊಳೊಸರುವ ಹೊಲಸಿನ
ತುಂಬಿ ಹೊರಡುವ ಮಲ ತುಳುಕುತಲಿ
ಇಂಬಿಲ್ಲದ್ಹೊಲಿಗೊಂಡವೆಂಬ ಠಾವಲಿ ಬಂದ
ಡಂಭಕ ತನಗಿನ್ಯಾತರ ಕುಲವಯ್ಯ || ೨ ||

ಕರುಳ ಖಂಡ ನರನಾರುವ ಚ
ರ್ಮರೋಹಿತ ಪಂಜರ ಹುರುಳಿಲ್ಲವೋ
ನರರುಹಹೊತ್ತು ತಿರುಗುವಂಥ
ತಿರುಕ ತನಗಿನ್ಯಾತರ ಕುಲವಯ್ಯ || ೩ ||

ನೆಟ್ಟು ಮೊಟ್ಟೆ ಭಾರಬಂಧನ ಸಿದ್ಧಿಗೆ
ಕಟ್ಟದೆ ಕಪಿಗಳು ತೊಗಲ ಬೊಕ್ಕಣವು
ಇಪ್ಪರೊಳಗೆ ಬಂದ ವಿವರವರಿಯದಿಂಥ
ಭ್ರಷ್ಟಗೆ ತನಗಿನ್ಯಾತರ ಕುಲವಯ್ಯ || ೪ ||

ಹಚ್ಚಡದ ಮೇಲೆ ಲಕ್ಷಣವಿಟ್ಟಂತೆ
ಹೆಚ್ಚು ಕಡಿಮೆ ಎಂದು ಹೆಣಗಾಡುತ್ತ
ನಿಚ್ಚ ಕಾಗಿನೆಲೆಯಾದಿ ಕೇಶವನ
ಹುಚ್ಚುದಾಸಗೆ ಇನ್ಯಾತರ ಕುಲವಯ್ಯ || ೫ ||

**ಅರ್ಥ :** ಅಂಧಕ=ಕುರುಡ. ಒಂಬತ್ತು ರಂಧ್ರಗಳು=೨ ಕಣ್ಣು, ೨ ಕಿವಿ, ೨ ಮೂಗಿನ ಹೊಳ್ಳೆಗಳು, ಬಾಯಿ, ಜನನೇಂದ್ರಿಯ ಮತ್ತು ಮಲದ್ವಾರ. ಠಾವು=ಸ್ಥಳ. ಡಂಭಕ=ಮೋಸಗಾರ, ಕಪಟಿ. ರೋಹಿತ=ರಕ್ತ. ಬೊಕ್ಕಣ=ಜೇಬು.

**ಭಾವ :** ಮನುಷ್ಯನಿಗೆ ವಾಸ್ತವವಾಗಿ ಯಾವುದೇ ಕುಲವಿಲ್ಲ ಹುಟ್ಟಿನಿಂದ. ಮಾನವರೆಲ್ಲರ ದೇಹ ರಚನೆಯು ಸ್ವರೂಪವೊಂದೇ. ಅದರಲ್ಲಿ ಭಿನ್ನತೆಯಿಲ್ಲ. ಆದ್ದರಿಂದ ತಾನು ಇಂಥ ಕುಲಜಾತಿಗಳಿಗೆ ಸೇರಿದವನೆಂದು ಮನುಷ್ಯ ಹೇಳಿಕೊಳ್ಳುವುದರಲ್ಲಿ ಅರ್ಥವಿಲ್ಲ.

## ಆವ ಸಿರಿಯಲಿ ನೀನು ಎನ್ನ ಮರೆತೆ ?

ರಾಗ: ಕಾನಡಾ, ಅಟತಾಳ

ಆವ ಸಿರಿಯಲಿ ನೀನು ಎನ್ನ ಮರೆತೆ ?
ದೇವ ಜಾನಕಿರಮಣ ಪೇಳು ರಘುಪತಿಯೆ ? || ಪ ||

ಸುರರ ಸೆರೆಯನು ಬಿಡಿಸಿ ಬಂದನೆಂಬಾ ಸಿರಿಯೆ
ಕರಿ ಮೊರೆಯ ಲಾಲಿಸಿದೆನೆಂಬ ಸಿರಿಯೆ ?
ಶರಧಿ ಸೇತುವೆಯ ಕಟ್ಟಿದೆನೆನ್ನುವಾಸಿರಿಯೆ
ಸ್ಥಿರವಾಗಿ ಹೇಳೆನಗೆ ಹೇಳು ರಘುಪತಿಯೆ || ೧ ||

ಕಡಲೊಳಗೆ ಮನೆ ಮಾಡಿ ಮಲಗಿದೆನೆಂಬಾ ಸಿರಿಯೆ
ಮೃಡ ನಿನ್ನ ಸಖನಾದನೆಂಬ ಸಿರಿಯೆ ?
ಬಿಡದೆ ದ್ರೌಪದಿ ಮಾನ ಕಾಯ್ದನೆಂಬ ಸಿರಿಯೆ ?
ದೃಢವಾಗಿ ಹೇಳೆನಗೆ ದೇವಕೀಸುತನೆ || ೨ ||

ಭೂಮಿಯನು ಮೂರಡಿಯ ಮಾಡಿದನೆಂಬ ಸಿರಿಯೆ
ಕಾಮ ನಿನ್ನ ಸುತನಾದನೆಂಬ ಸಿರಿಯೆ
ಆ ಮಹಾಲಕುಮಿ ನಿನ್ನ ಸತಿಯಾದಳೆಂಬ ಸಿರಿಯೆ ?
ಪ್ರೇಮದಲಿ ಹೇಳೆನಗೆ ಸ್ವಾಮಿ ಅಚ್ಯುತನೆ || ೩ ||

ಮನುಜರೆಲ್ಲರು ನಿನ್ನ ಸ್ತುತಿಸುವರೆಂಬ ಸಿರಿಯೆ
ಹನುಮ ನಿನ್ನ ಬಂಟನಾದನೆಂಬ ಸಿರಿಯೆ
ಬಿನುಗುದೈವಗಳು ನಿನಗೆಣೆಯಿಲ್ಲವೆಂಬ ಸಿರಿಯೆ
ಅನುಮಾನ ಮಾಡದೆ ಪೇಳೊ ನರಹರಿಯೆ || ೪ ||

ಇಂತು ಸಿರಿಯಲಿ ನೀನು ಎನ್ನ ಮರೆತರೆ ಸ್ವಾಮಿ
ಪಂಥವೇ ನಿನಗಿದು ಆವ ನಡತೆ ?
ಕಂತುಪಿತ ಕಾಗಿನೆಲೆಯಾದಿಕೇಶವರಂಗ
ಚಿಂತೆಯನು ಬಿಡಿಸಿ ಸಂತೋಷಪಡಿಸೊ || ೫ ||

ಅರ್ಥ : ಕರಿ ಮೊರೆ=ಗಜೇಂದ್ರನ ಪ್ರಾರ್ಥನೆ. ಶರಧಿ=ಕಡಲು, ಸಮುದ್ರ. ಮೃಡ=ಶಿವ. ಬಿನುಗು= ದ್ರ. ಕಂತುಪಿತ=ಕಾಮನ ತಂದೆಯಾದ ವಿಷ್ಣು.

ಭಾವ : ಪರಮಾತ್ಮನ ವೈಭವ ಅಪಾರ. ಆತ ಮಹಿಮಾಶಾಲಿ. ಅಂಥವನು ತನ್ನ ಐಸಿರಿಯಲ್ಲಿ ಭಕ್ತನನ್ನು ಮರೆತನೇ ? ಭಕ್ತನ ಮೊರೆ ಆತನಿಗೆ ಕೇಳಿಸುವುದಿಲ್ಲವೇ ? ಎನ್ನುವ ಚಿಂತೆ ಭಕ್ತನಿಗೆ. ಆತ ದೈವಗಳಲ್ಲಿಯೋ ಪರಮ ದೈವ. ಯಾರೂ ಸಮನಲ್ಲ. ಆತ ಬಂದು ಭಕ್ತನ ಚಿಂತೆ ಪರಿಹರಿಸಬೇಕು ; ಭಕ್ತನನ್ನು ಉದ್ಧರಿಸಬೇಕು.

ಭಕ್ತ ಮತ್ತು ಭಗವಂತ ಇವರ ನಡುವಿನ ಸಂಬಂಧ ಸಲುಗೆಯನ್ನು ಇಲ್ಲಿ ಕಾಣುತ್ತೇವೆ. ಭಕ್ತ ದೇವರ ಜೊತೆಗಿನ ಆತ್ಮೀಯತೆಯಿಂದಾಗಿ ದೇವರನ್ನೇ ಪ್ರಶ್ನಿಸುತ್ತಾನೆ.

# ಎಲ್ಲಿರುವನೋ ರಂಗ

ರಾಗ : ಮುಖಾರಿ, ಝಂಪೆತಾಳ

ಎಲ್ಲಿರುವನೋ ರಂಗ ಎಂಬ ಸಂಶಯ ಬೇಡ || ಪ ||
ಎಲ್ಲಿ ಭಕ್ತರು ಕರೆಯೆ ಅಲ್ಲಿ ಬಂದೊದಗುವನು || ಅ ||

ತರಳ ಪ್ರಹ್ಲಾದ ಹರಿವಿಶ್ವಮಯನೆಂದು
ಭರದೊದೆಯಲವನಪಿತ ಕೋಪದಿಂದ
ಸ್ಥಿರವಾದೊಡೀ ಕಂಭದಲಿ ತೋರು ತೋರೆನಲು
ಭರದಿಂದ ಬರಲದಕೆ ವೈಕುಂಠ ನೆರೆಮನೆಯೆ ? || ೧ ||

ಪಾಪಕರ್ಮವ ಮಾಡಿದಜಮಿಳನ ಯಮಭಟರು
ಕೋಪದಿಂದೆಳೆಯುತಿರೆ ಭೀತಿಯಿಂದ
ತಾ ಪುತ್ರನನು ಕರೆಯೆ ಕೇಳಿ ರಕ್ಷಿಸೆ ಶ್ವೇತ
ದ್ವೀಪವೀ ಧರೆಗೆ ಸಮೀಪದಲ್ಲಿಹುದೆ ? || ೨ ||

ಕರಿರಾಜನನು ನೆಗಳು ನುಂಗುತಿರೆ ಭಯದಿಂದ
ಮೊರೆಯಿಡಲು ಕೇಳಿ ತ್ವರಿತದಲಿ ಬಂದು
ಕರುಣದಲಿ ಬಂಧನವ ಪರಿಹರಿಸೆ ಗಜರಾಜ
ನಿರುವ ಸರಸಿಯು ಅನಂತಾಸನಕೆ ಮುಮ್ಮನೆಯೆ ? || ೩ ||

ಕುರುಪತಿಯು ದ್ರೌಪದಿಯ ಸೀರೆಯನು ಸೆಳೆಯುತಿರೆ
ತರುಣಿ ಹಾ ಕೃಷ್ಣ ಎಂದೊದರೆ ಕೇಳ್ದು
ಭರದಿಂದ ಅಕ್ಷಯಾಂಬರವೀಯೆ ಹಸ್ತಿನಾ
ಪುರಿಗೆ ದ್ವಾರಾವತಿಯು ಕೂಗಳತೆಯೆ ? || ೪ ||

ಅಣುಮಹತ್ತಿನೊಳೆಲ್ಲ ಪರಿಪೂರ್ಣ ವಿಶ್ವಮಯ
ಗಣನೆಯಿಲ್ಲದ ಮಹಾಮಹಿಮನೆನಿಪ
ಘನಕೃಪಾನಿಧಿ ಕಾಗಿನೆಲೆಯಾದಿಕೇಶವನು
ನೆನೆದವರ ಮನದೊಳಿಹನೆಂಬ ಬಿರುದುಂಟಾಗಿ || ೫ ||

ಅರ್ಥ : ಅಜಮಿಳ=ಒಬ್ಬ ಭಕ್ತ. ಶ್ವೇತದ್ವೀಪ=ವೈಕುಂಠ.

ಭಾವ : ದೇವರು ಎಲ್ಲಿದ್ದಾನೆ ಎನ್ನುವ ಸಂಶಯು ಬೇಡ. ಆತ ಎಲ್ಲೆಡೆ ಇದ್ದಾನೆ. ನೆನೆದವರ ಮನದಲ್ಲಿರುವ ಮಹಾಮಹಿಮ ದೇವರು. ಪ್ರಹ್ಲಾದ, ಅಜಮಿಳ, ಗಜರಾಜ, ದ್ರೌಪದಿ ಮುಂತಾದ ಭಕ್ತರು ಭಕ್ತಿಯಿಂದ ಮೊರೆಯಿಟ್ಟಾಗ ಅವರನ್ನು ಕಷ್ಟದಿಂದ ಶೀಘ್ರವಾಗಿ ಪಾರುಮಾಡಿದ ದಯಾಮಯ ಇವನು.

# ಎಲ್ಲಿ ನೋಡಿದರಲ್ಲಿ ರಾಮ

ರಾಗ : ಷಂತುವರಾಳಿ, ಛಾಪುತಾಳ

ಎಲ್ಲಿ ನೋಡಿದರಲ್ಲಿ ರಾಮ–ಇದ || ಪ ||
ಬಲ್ಲ ಜಾಣರ ದೇಹದಲ್ಲಿ ನೋಡಣ್ಣ || ಅ ||

ಕಣ್ಣೆ ಕಾಮನ ಬೀಜ
ಕಣ್ಣಿಂದಲೆ ನೋಡು ಮೋಕ್ಷ ಸಾಮ್ರಾಜ್ಯ
ಕಣ್ಣಿನ ಮೂರುತಿ ಬಿಗಿದು | ಒಳ
ಗಣ್ಣಿಂದಲೆ ದೇವರ ನೋಡಣ್ಣ || ೧ ||

ಮೂಗೆ ಶ್ವಾಸ ನಿಶ್ವಾಸ | ಈ
ಮೂಗಿಂದಲೆ ಕಾಣೊ ಯೋಗ ಸನ್ಯಾಸ
ಮೂಗನಾದರೆ ವಿಶೇಷ | ಒಳ
ಮೂಗಿಂದ ನೋಡಣ್ಣ ಲೀಲಾ ವಿಲಾಸ || ೨ ||

ಕಿವಿಯೆ ಕರ್ಮಕೆ ದ್ವಾರ | ಈ
ಕಿವಿಯಿಂದಲೆ ಕೇಳೋ ಮೋಕ್ಷಸಾರ
ಕಿವಿಯೆ ಕರ್ಮಕುಠಾರ | ಒಳ
ಗಿವಿಯಲ್ಲಿ ಕಾಣೊ ನಾದದ ಬೇರ || ೩ ||

ಬೊಮ್ಮ ಮಾಡಿದ ತನು ಬಿಟ್ಟು | ವಿಶ್ವ
ಕರ್ಮ ಮಾಡಿದ ಬೊಂಬೆಯುನಿಟ್ಟು
ಸುಮ್ಮನೆ ಕೂಗುಗಳಟ್ಟು | ಅದ
ನಂಬುವನೆಂಬೋನೆ ಹೋದ ಕಂಗೆಟ್ಟು || ೪ ||

ರೂಢಿಯೊಳಗೆ ಶುದ್ಧ ಮೂಢ | ಈ
ಕಾಡು ಕಲ್ಲುಗಳನ್ನು ನಂಬಲು ಬೇಡ
ನಾಡಾಡಿ ದೈವಗಳಿಲ್ಲ | ನಮ್ಮ
ಬಾಡದಾದಿಕೇಶವನೊಬ್ಬನೆ ಬಲ್ಲ || ೫ ||

ಅರ್ಥ : ಬೊಮ್ಮ=ಬ್ರಹ್ಮ.

ಭಾವ : (ರಾಮ) ದೇವರು ಎಲ್ಲೆಲ್ಲಿಯೂ ಇದ್ದಾನೆ. ಜ್ಞಾನಿಗಳಲ್ಲಿ ದೇವರಿದ್ದಾನೆ. ಮಾನವನ ಬಿಟ್ಟು ದೇವರಿಲ್ಲ. ಇಂದ್ರಿಯಗಳಲ್ಲಿ ದೇವರಿದ್ದಾನೆ. ಅನುಭವಿಸುವ ತಿಳಿಯುವ ಜಾಣ್ಮೆಯಿರಬೇಕು. ಕಾಡುಕಲ್ಲುಗಳನ್ನೇ ದೇವರೆಂದು ನಂಬಕೂಡದು. ಶರೀರ ಬ್ರಹ್ಮನ ಸೃಷ್ಟಿ. ಅದರಲ್ಲಿಯೇ ದೇವರಿದ್ದಾನೆಂದು ಅರಿಯಬೇಕು. ದೇವರು ಎಲ್ಲೆಲ್ಲಿಯೂ ಇದ್ದಾನೆ. ಜ್ಞಾನಿಗಳು ದೇವರನ್ನು ಅರಿತುಕೊಳ್ಳುವ ಸಾಧನವಾಗಿ ದೇಹವನ್ನು ಬಳಸಿಕೊಳ್ಳುತ್ತಾರೆ. ಕಣ್ಣು ಮೂಗು ಕಿವಿ ಮುಂತಾದ ಪಂಚೇಂದ್ರಿಯಗಳು ವಿಷಯಾಸಕ್ತಿಗೆ ಮೂಲವಾಗಿರುವಂತೆಯೇ ಮೋಕ್ಷಕ್ಕೂ ಸಾಧನವಾಗಿವೆ. ಕಂಡ ಕಂಡ ದೈವಗಳನ್ನು ಭಜಿಸದೆ ಒಬ್ಬನೇ ದೇವನೆಂದು ನಂಬು.

# ಎಂದಿದ್ದರೀಕೊಂಪೆ ಎನಗೆ ನಂಬಿಕೆಯಿಲ್ಲ

ರಾಗ: ಕಾಂಬೋದಿ, ಝಂಪೆತಾಳ

ಎಂದಿದ್ದರೀಕೊಂಪೆ ಎನಗೆ ನಂಬಿಕೆಯಿಲ್ಲ
ಮುಂದರಿತು ಹರಿಪಾದ ಹೊಂದುವುದು ಲೇಸು ॥ ಪ ॥

ಎಲುವುಗಳು ತೊಲೆ–ಜಂತಿ ನರಗಳವು ಬಿಗಿದಂತೆ
ಬಲಿದ ಚರ್ಮವು ಮೇಲು ಹೊದಿಕೆಯಂತೆ
ಗಳಗಳನೆ ನುಡಿವ ನಾಲಗೆ ಗಂಟೆಯಂತೆ
ಕೆಲಕಾಲಕೀಕೊಂಪೆ ಕಡೆಗಾಹುದಂತೆ ॥ ೧ ॥

ಕಂಡಿಗಳು ಒಂಬತ್ತು ಕಳ ಬಂಟರೈವರು
ಅಂಡಲೆವುದೊತ್ತಿನಲಿ ಷಡ್ವರ್ಗವು
ಮಂಡಲಕೆ ಹೊಸಪರಿಯು ಮನ್ಮಥನ ಠಾಣ್ಯವಿದು
ಮಂಡೆ ಹೋಗುವುದನ್ನು ಅರಿಯದೀ ಕೊಂಪೆ ॥ ೨ ॥

ಕೊಂಪೆಯಲಿ ಶೃಂಗಾರ ಕೊಂಡಾಡಲಳವಲ್ಲ
ಕೆಂಪು ಬಣ್ಣಗಳಿಂದ ಚೆನ್ನಾಯಿತು
ಇಂಪಿನಲಿ ಕಾಗಿನೆಲೆಯಾದಿಕೇಶವನನ್ನು
ಸೊಂಪಿನಲಿ ನೆನೆನೆನೆದು ಸುಖಿಯಾಗೊ ಮನುಜಾ ॥ ೩ ॥

ಅರ್ಥ: ಕಳಬಂಟರೈವರು=ದುಷ್ಟರಾದ ಐದು ಜನ (ಪಂಚೇಂದ್ರಿಯಗಳು). ಅಂಡಲೆ= ಪೀಡಿಸು, ಕಾಡಿಸು. ಮಂಡಲ=ಪ್ರಪಂಚ (ಭೂಮಿ). ಠಾಣ್ಯ=ಸ್ಥಳ. ನವದ್ವಾರ= ಬಾಯಿ, ಕಿವಿಗಳು, ಕಣ್ಣುಗಳು, ಮೂಗಿನ ಹೊಳ್ಳೆಗಳು, ಮೂತ್ರದ್ವಾರ, ಗುದ.

ಭಾವ: ಬಿದ್ದುಹೋಗುವ ಶರೀರವನ್ನು ಕೊಂಪೆಗೆ ಹೋಲಿಸಲಾಗಿದೆ. ಒಂದಲ್ಲ ಒಂದುದಿನ ಈ ದೇಹ ಅಳಿದುಹೋಗುತ್ತದೆ. ಅದರ ಅರಿವಿಲ್ಲದೆ ಕಾಮ ಕ್ರೋಧ ಲೋಭ ಮದ ಮತ್ಸರಾದಿಗಳ ವಶವಾಗಿ ಮಾನವ ದುಃಖಕ್ಕೆ ಈಡಾಗಬಾರದು. ದೇವರ ಸ್ಮರಣೆಯಿಂದ ಜೀವನವನ್ನು ಸುಖಮಯಗೊಳಿಸಬೇಕು.

## ಎಳ್ಳುಕಾಳಿನಷ್ಟು ಭಕುತಿಯೆನ್ನೊಳಗಿಲ್ಲ

ರಾಗ : ಗೌಳಿಪಂತು, ತ್ರಿಪುಟತಾಳ

ಎಳ್ಳುಕಾಳಿನಷ್ಟು ಭಕುತಿಯೆನ್ನೊಳಗಿಲ್ಲ
ಕಳ್ಳರಿಗೆ ಕಳ್ಳನಂತೆ ಬೆಳ್ಳಕ್ಕಿಯಂದದಿ ಡಂಭ ॥ ಪ ॥

ಗುಂಡುಮುಣುಗಿನ ಹಕ್ಕಿಯಂತೆ ಕಂಡಕಂಡ ನೀರ ಮುಳುಗಿ
ಮಂಡೆಶೂಲೆ ಬಾಹುದ್ಯೆಸೆ ಗತಿಯ ಕಾಣೆನೊ
ಮಂಡೂಕನಂದದಿ ಕೆರೆಯ ದಂಡೆಯಲ್ಲಿ ಕುಳಿತುಕೊಂಡು
ಮುಂಡಮುಸುಕನಿಟ್ಟು ಮೂಗ ಹಿಡಿವ ಭ್ರಮಿತ ನಾನಯ್ಯ ॥ ೧ ॥

ಗಾಣದೆತ್ತಿನಂತೆ ಕಣ್ಣ ಮುಚ್ಚಿ ಪ್ರದಕ್ಷಿಣೆ ಮಾಡಿ
ಕಾಣದೆ ತಿರುಗುವೆನೆರಡು ಕಣ್ಣಿದ್ದು ನಾನು
ಮಾಣಿಕ್ಯದ ರಾಶಿಯಲ್ಲಿ ಅಂಧಕರೈವರು ಕೂಡಿ
ಆಣಿಮುತ್ತ ಹಿಡಿದು ಹಿಡಿದು ಬಿಡುವ ಭ್ರಮಿತ ನಾನಯ್ಯ ॥ ೨ ॥

ಇಕ್ಕುಳವ ಕೈಯಲ್ಲಿ ಪಿಡಿದು ಕಾದ ಕಬ್ಬಿಣ ತೆಗಿಸಿ
ಹೊಕ್ಕು ಮುಂದಕೆ ಎಳಸಿ ಹೊಮ್ಮುವ ಗತಿ ಕಾಣೊ
ಹೊಕ್ಕುಳಹೂವಿನ ಬಾಡದಾದಿಕೇಶವನ ಮೊರೆ
ಹೊಕ್ಕೆನಿಂದು ಕಾಯ್ದುಕೊಳ್ಳೊ ದೇವಾಧಿ ದೇವೋತ್ತಮನೆ ॥ ೩ ॥

ಅರ್ಥ : ಗುಂಡುಮುಳುಗನ ಹಕ್ಕಿ,ಗುಂಡುಮುಣುಗಿನಹಕ್ಕಿ=ಜಾಲಗಾರ ಹಕ್ಕಿ (ಜಾಲಗಾರನಿಗೇ ಮೋಸ ಮಾಡುವಂಥದು). (ಬುಂಡೆಮುಳುಗನಹಕ್ಕಿ=ಕುಂಡುಮುಳುಗನ ಹಕ್ಕಿ). ಬಾಹುದು=ಬರುವುದು. ಅಂಧಕರೈವರು=ಅಜ್ಞಾನದಿಂದ ಕೂಡಿದ ಪಂಚೇಂದ್ರಿಯಗಳು. 'ಬಾಡದ' ಪದಪ್ರಯೋಗ ಎರಡು ಅರ್ಥ. ಒಂದು: ಬಾಡ ಎನ್ನುವ ಊರಿನ 'ಬಾಡದ' ಎರಡು: ವಿಷ್ಣುವಿನ ಹೊಕ್ಕುಳಲ್ಲಿ ಕಮಲವಿದೆ ಎನ್ನು ಭಾವನೆ; ಈ ಹೂವು ಎಂದಿಗೂ 'ಬಾಡದು'. ಆದ್ದರಿಂದ (ಹೂವಿನ) 'ಬಾಡದ....'

ಭಾವ : ಆಡಂಬರದ, ಬೂಟಾಟಿಕೆಯ ನಡವಳಿಕೆ ಭಕ್ತನಿಗೆ ಸಲ್ಲದು. ಮೇಲೆ ಬೆಳ್ಳಕ್ಕಿ, ಒಳಗೆ ಕುಹಕ. ಇಂಥ ನಟನೆಯ ಭಕ್ತರ ಸ್ಥಿತಿಗತಿಗಳನ್ನು ಇಲ್ಲಿ ವಿಡಂಬಿಸಲಾಗಿದೆ. ಕೇವಲ ಅಜ್ಞಾನವೇ ಇಂಥ ನಡೆನುಡಿಗೆ ಕಾರಣ; ಆದ್ದರಿಂದ ದೇವರನ್ನೇ ಮೊರೆಹೊಗಬೇಕು. (ಭಕ್ತರನ್ನು) ಆತನೇ ಕಾಪಾಡಬೇಕು.

# ಏನು ಇಲ್ಲದ ಎರಡು ದಿನದ ಸಂಸಾರ

ರಾಗ : ಮುಖಾರಿ, ಝಂಪೆತಾಳ

ಏನು ಇಲ್ಲದ ಎರಡು ದಿನದ ಸಂಸಾರ ॥ ಪ ॥
ಜ್ಞಾನದಲಿ ದಾನ ಧರ್ಮವ ಮಾಡಿರಯ್ಯ ॥ ಅ ॥

ಹಸಿದು ಬಂದವರಿಗೆ ಅಶನವನೀಯಲು ಬೇಕು
ಶಿಶುವಿಗೆ ಪಾಲ್ಬೆಣ್ಣೆಯುಣಿಸಬೇಕು
ಹಸನಾದ ಭೂಮಿಯನು ಧಾರೆಯೆರೆಯಲು ಬೇಕು
ಪುಸಿಯಾಡದಲೆ ಭಾಷೆ ನಡೆಸಲೇ ಬೇಕು ॥ ೧ ॥

ಕಳ್ಳತನಗಳ ಮಾಡಿ ಒಡಲು ಹೊರೆಯಲು ಬೇಡ
ತಳ್ಳಿಗಾರನು ಆಗಿ ತಿರುಗಬೇಡ
ಕುಳ್ಳಿರ್ದ ಸಭೆಯೊಳಗೆ ಕುತ್ಸಿತವು ಬೇಡ
ಉಳ್ಳವನು ನಾನೆಂದು ಉಬ್ಬಬೇಡ ॥ ೨ ॥

ದೊರೆತನವು ಬಂದಾಗ ಕೆಟ್ಟ ನುಡಿಯಲು ಬೇಡ
ಸಿರಿ ಬಂದ ಕಾಲಕ್ಕೆ ಉರಿಯಬೇಡ
ಸಿರಿವಂತ ಶ್ರೀ ಕಾಗಿನೆಲೆಯಾದಿ ಕೇಶವನ
ಚರಣಕಮಲವ ಸೇರಿ ಸುಖಿಯಾಗು ಮನುಜಾ ॥ ೩ ॥

ಅರ್ಥ : ಅಶನ=ಆಹಾರ. ತಳ್ಳಿಗಾರ=ಉದ್ಯೋಗ ಮಾಡದವ, ತಂಟಿಕೋರ, ಮೋಸಗಾರ. ಕುತ್ಸಿತ=ಕುಹಕ, ಕೇಡು.

ಭಾವ : ಸಂಸಾರದ ನಿಷ್ಪ್ರಯೋಜಕತೆಯನ್ನು ನಿಸ್ಸಾರತೆಯನ್ನು ಅನಿತ್ಯತೆಯನ್ನು ಇಲ್ಲಿ ವಿವರಿಸಲಾಗಿದೆ. ಮನುಷ್ಯ ನಶ್ವರ. ಆದ್ದರಿಂದ ಕುಹಕ, ಕೆಡುನುಡಿ, ಸುಳ್ಳು ಇತ್ಯಾದಿ ನುಡಿಯದೆ ಅರಿವಿನಿಂದ ಬಾಳಬೇಕು. ಕಳ್ಳತನ ಮಾಡಬಾರದು. ಉದ್ಯೋಗ ಮಾಡದೆ ತಂಟಿಕೋರನಾಗಿ ತಿರುಗಬಾರದು. ಅಧಿಕಾರ ಬಂದಾಗ ಕೆಟ್ಟ ಮಾತಾಡ ಬಾರದು. ಸಿರಿತನ ಬಂದಾಗ ಸೊಕ್ಕು ಮಾಡಬಾರದು. ದೇವರಲ್ಲಿ ಭಕ್ತಿಯುಳ್ಳವ ನಾದರೆ ನಿಜವಾದ ಸುಖ ದೊರೆಯುತ್ತದೆ.

# ಊರಿಗೆ ಬಂದರೆ ದಾಸಯ್ಯ

ರಾಗ: ಪೂರ್ವಿ, ಅಟತಾಳ

ಊರಿಗೆ ಬಂದರೆ ದಾಸಯ್ಯ | ನಮ್ಮ
ಕೇರಿಗೆ ಬಾ ಕಂಡ್ಯ ದಾಸಯ್ಯ ॥ ಪ ॥

ಕೋಲು ಕೊಳಲು ಕೈಲಿ ದಾಸಯ್ಯ ನೀ
ಕಲ್ಲಿಗೆ ವರವಿತ್ತೆ ದಾಸಯ್ಯ
ಮಲ್ಲನ ಮರ್ದಿಸಿ ಮಾವನ ಮಡುಹಿದ
ನೀಲಮೇಘಶ್ಯಾಮ ದಾಸಯ್ಯ ॥ ೧ ॥

ಕೊರಳೊಳು ವನಮಾಲೆ ದಾಸಯ್ಯ ಬಲು
ಗಿರಿಯನು ನೆಗಹಿದ ದಾಸಯ್ಯ
ಇರುಳು ಹಗಲು ನಿನ ಕಾಣದೆ ಇರಲಾರೆ
ಮರುಳು ಮಾಡುವಂಥ ದಾಸಯ್ಯ ॥ ೨ ॥

ಆದಿನಾರಾಯಣ ದಾಸಯ್ಯ ನೀ
ಒಂದು ಸಾಸಿರ ನಾಮದ ದಾಸಯ್ಯ
ನಂದಗೋಕುಲದೊಳು ಹುಟ್ಟಿ ಗೋವ್ಗಳ ಕಾಯ್ದ
ಆದಿಕೇಶವರಾಯ ದಾಸಯ್ಯ ॥ ೩ ॥

**ಅರ್ಥ:** ಕಲ್ಲಿಗೆ ವರ=ಅಹಲ್ಯೆಯ ಉದ್ಧಾರ. ಮಲ್ಲ=ಜಟ್ಟಿ (ಚಾಣೂರ). ಮರ್ದಿಸು=ಚಚ್ಚಿಕೊಲ್ಲು. ಮಾವ=ಕಂಸ.

**ಭಾವ:** ಪರಮಾತ್ಮನ ಲೀಲೆ ಹಾಡುವ ದಾಸರು ದೇವರ ಸ್ವರೂಪ. ಅವರನ್ನು ಆದರಿಸಬೇಕು; ಪೂಜಿಸಬೇಕು.

# ಕನಕದಾಸನ ಮೇಲೆ ದಯ ಮಾಡಲು

ರಾಗ : ಕಾಂಬೋದಿ, ಝಂಪೆತಾಳ

ಕನಕದಾಸನ ಮೇಲೆ ದಯ ಮಾಡಲು ವ್ಯಾಸ
ಮುನಿ ಮಠಿಕರೆಲ್ಲರು ದೂರುತಿಹರೊ ‖ ಪ ‖

ತೀರ್ಥವನು ಕೊಡುವಾಗ ಕನಕನ್ನ ಕರೆಯೆನಲು
ಧೂರ್ತರಾಗಿದ್ದ ವಿದ್ವಾಂಸರೆಲ್ಲಾ
ಸಾರ್ಥಕವಾಯ್ತು ಇವರ ಸನ್ಯಾಸಿತನವೆಲ್ಲ
ಪೂರ್ತ್ಯಾಗಲೆಂದು ಯತಿ ನಗುತಲಿಹನು ‖ ೧ ‖

ಮರುದಿನ ಅವರವರ ಪರೀಕ್ಷಿಸಬೇಕೆಂದು
ಕರೆದು ಸನ್ಯಾಸಿಗಳ ಕನಕ ಸಹಿತ
ತ್ವರಿತದಲಿ ಕರದಲ್ಲಿ ಕದಳಿ ಫಲವನೆ ಕೊಟ್ಟು
ಯಾರಿರದ ಸ್ಥಳದಲ್ಲಿ ಮೆದ್ದು ಬನ್ನಿರಿ ಎನಲು ‖ ೨ ‖

ಊರಹೊರಗೆ ಹೋಗಿ ಬ್ಯಾರೆ ಬ್ಯಾರೆ ಕುಳಿತು
ತ್ವರಿತದಿಂ ಮೆದ್ದು ವಿದ್ವಾಂಸರೆಲ್ಲ
ತೋರಲಿಲ್ಲವು ಎನಗೆ ಏಕಾಂತ ಸ್ಥಳವೆನುತ
ಸಾರಿ ಕದಳಿ ಫಲವ ತಂದು ಮುಂದಿಟ್ಟ ‖ ೩ ‖

ಡಿಂಬದೊಳು ಶಬ್ದವಾಗಾದಿ ಶ್ರೋತ್ರಗಳಲ್ಲಿ (?)
ಇಂಬಾಗಿ ತತ್ತ್ವೇಶರೆಲ್ಲ ತುಂಬಿಹರು
ತಿಂಬುವುದು ಹ್ಯಾಂಗೆನುತ ವ್ಯಾಸರಾಯರ ಕೇಳೆ
ಕಂಬದಂತಾದವರೆಲ್ಲ ಕುಳಿತವರು ‖ ೪ ‖

ಮಾಣಿಕವು ಕೋಡಗನ ಕೈಯಲ್ಲಿ ಇದ್ದಂತೆ
ಕೋಣನಿದಿರಿಗೆ ಕಿನ್ನರಿಯ ಮೀಟಿದಂತೆ
ವೇಣುಧ್ವನಿ ಬಧಿರನ ಬಳಿ ಹೊರಡಿಸಿದಂತೆ ಕಣ್
ಕಾಣದವನಿಗೆ ಕನ್ನಡಿಯ ತೋರಿದಂತೆ ‖ ೫ ‖

ನೋಡಿದಿರ ಈ ಕನಕನಾಡುವ ಮಾತುಗಳ
ಮೂಢ ಜನರರಿಯಬಲ್ಲರೆ ಮಹಿಮೆಯ
ನಾಡಾಡಿಯಂತೆಯೆ ಮಾಡಿಬಿಟ್ಟರು ಇವಗೆ
ನಾಡೆಲ್ಲ ಹುಡುಕಿದರು ಈಡಾರ ಕಾಣೆ ॥ ೬ ॥

ಕರದಲ್ಲಿ ಮೂರ್ತಿಯನು ಪಿಡಿದು ಕೇಳುತ್ತಿರಲು
ಅರಿಯದ ಜ್ಞಾನದಲಿ ಪೇಳುತಿರಲು
ತ್ವರದಿ ಕನಕನು ಬಂದು ವಾಸುದೇವನ ರೂಪ
ಪರಬೊಮ್ಮ ಪುರಂದರವಿಠಲೆಂದು ಪೇಳಿದನು[1] ॥ ೭ ॥

ಅರ್ಥ : ಕದಳಿ=ಬಾಳೆ. ಡಿಂಬ=ಶರೀರ. ತತ್ತ್ವೇಶ=ಧರ್ಮತತ್ತ್ವಗಳು. ಬಧಿರ=ಕಿವುಡ. ನಾಡಾಡಿ=ಸಾಮಾನ್ಯ ಮನುಷ್ಯ.

ಭಾವ : ಗುರು ವ್ಯಾಸರಾಯರು, ಕದಳಿ ಫಲ ಕೊಟ್ಟು ದೇವರು ಇಲ್ಲದ ಜಾಗದಲ್ಲಿ ತಿಂದು ಬನ್ನಿ ಎಂದಾಗ ಕನಕನನ್ನು ಹೊರತುಪಡಿಸಿ ಉಳಿದವರೆಲ್ಲ ಯಾರಿಗೂ ಕಾಣದಂತೆ ಹಣ್ಣು ನುಂಗಿಬಂದರು. ಕನಕ ಮಾತ್ರ ಹಣ್ಣು ಹಾಗೇ ತಂದು ಎಲ್ಲ ಕಡೆಗೂ ದೇವರಿದ್ದಾನೆ, ಅದ್ದರಿಂದ ಬಾಳೇಹಣ್ಣನ್ನು ಹೇಗೆ ತಿನ್ನುವುದು ಎಂದು ಕೇಳಿದ ಪ್ರಸಂಗ ಇಲ್ಲಿ ನಿರೂಪಿತವಾಗಿದೆ.

---

1 ಈ ಕೀರ್ತನೆಗೆ ಪುರಂದರವಿಠಲನ ಅಂಕಿತವಿದೆ. ಇದು ಕನಕದಾಸರ ರಚನೆಯೆನ್ನುವ ನಂಬಿಕೆಯೂ ಇದೆ.

# ಡಿಂಬಿನೊಳು ಪ್ರಾಣವಿರಲು

ರಾಗ: ಶಂಕರಾಭರಣ, ಆದಿತಾಳ

ಡಿಂಬಿನೊಳು ಪ್ರಾಣವಿರಲು ಕಂಬಸೂತ್ರಗೊಂಬೆಯಂತೆ
ಎಂದಿದ್ದರೊಂದು ದಿನ ಸಾವು ತಪ್ಪದು ‖ ಪ ‖

ಹುಟ್ಟಿತೇನು ತರಲಿಲ್ಲ ಹೋಗುತೇನು ಒಯ್ಯಲಿಲ್ಲ
ಸುಟ್ಟುಸುಟ್ಟು ಸುಣ್ಣದ ಹರಳಾಯಿತೀ ದೇಹ
ಹೊಟ್ಟೆ ಬಲು ಕೆಟ್ಟದೆಂದು ಎಷ್ಟು ಕಷ್ಟಪಟ್ಟು ಪ್ರಾಣ
ಬಿಟ್ಟು ಹೋಗುವಾಗ ಗೇಣು ಬಟ್ಟೆ ಕಾಣಲಿಲ್ಲವೊ ‖ ೧ ‖

ಹೆಣ್ಣು ಹೊನ್ನು ಮಣ್ಣು ಮೂರು ತನ್ನಲಿದ್ದು ಕಾಣಲಿಲ್ಲ
ಅಣ್ಣ ತಮ್ಮ ತಾಯಿ ತಂದೆ ಬಯಸಲಾಗದು
ಅನ್ನ ವಸ್ತ್ರ ಭೋಗಿಯಾಗಿ ತನ್ನ ಸುಖವ ಕಾಣಲಿಲ್ಲ
ಮಣ್ಣುಪಾಲು ಆದಮೇಲೆ ಆರಿಗಾಹೋದು ? ‖ ೨ ‖

ಬೆಳ್ಳಿಬಂಗಾರಿಟ್ಟುಕೊಂಡು ಒಳ್ಳೆ ವಸ್ತ್ರ ಹೊದ್ದುಕೊಂಡು
ಅಳ್ಳಾಚಾರಿಗೊಂಬೆ(?)ಯಂತೆ ಆಡಿಹೋಯಿತು
ಹಳ್ಳ ಹರಿದು ಹೋಗುವಾಗ ನೀರಗುಳ್ಳೆ ಒಡೆಯುವಂತೆ
ಉಳ್ಳಿಯ ಪೊರೆಯಂತೆ ಕಾಣೊ ಸಂಸಾರದಾಟವು ‖ ೩ ‖

ಹೆತ್ತು ಎಂಟು ಲಕ್ಷ ಗಳಿಸಿ ಮತ್ತೆ ಸಾಲದೆಂದು ಪರ
ರರ್ಥಕಾಗಿ ಆಸೆಪಟ್ಟು ನ್ಯಾಯ ಮಾಡುವರೊ
ಬಿತ್ತಿ ಬೆಳೆವೆನೆಂದು ನೀವು ವ್ಯರ್ಥ ಚಿಂತೆ ಮಾಡಿ ಬರಿದೆ
ಸತ್ತುಹೋದಮೇಲೆ ನಿಮ್ಮ ಅರ್ಥವಾರಿಗೊ ‖ ೪ ‖

ವಾರ್ತೆಕೀರ್ತಿಯೆಂಬವೆರಡು ಬಂದುವಯ್ಯ ಸತ್ತಮೇಲೆ
ವಸ್ತು ಪ್ರಾಣನಾಯಕನು ದೊರಕಲಿಲ್ಲವು
ಕರ್ತಕಾಗಿನೆಲೆಯಾದಿಕೇಶವ ನಾರಾಯಣನ
ಅರ್ಥಿಯಿಂದ ಭಜಿಸಿ ನೀವು ಸುಖ ಬಾಳಿರೊ ‖ ೫ ‖

ಅರ್ಥ: ಡಿಂಬ=ಶರೀರ. ಕಂಬಸೂತ್ರ=ಒಂದು ಕೋಲಿಗೆ ಹಾಕಿದ ಸೂತ್ರ. ಅಳ್ಳಾಚಾರಿ ಗೊಂಬೆ=ಗೊಂಬೆರೂಪಿಸಿದ ವ್ಯಕ್ತಿ (ಕಲಾಕಾರ, ಸೃಷ್ಟಿಕರ್ತ). ವಾರ್ತೆ=ಪ್ರಚಾರ, ಸುದ್ದಿ. ವಸ್ತು ಪ್ರಾಣನಾಯಕ=ಭಗವಂತ.

ಭಾವ: ಬೆರಳಿಂದ ಆಡಿಸುವ ಸೂತ್ರದ ಗೊಂಬೆಯಂತೆ ಈ ಶರೀರದೊಳಗಿರುವ ಪ್ರಾಣ. ಮಾನವಜೀವಿಗೆ ಸಾವು ತಪ್ಪದು. ನಾನು ನನಗೆ ನನ್ನ ಹೆಂಡತಿ ಮಕ್ಕಳು ಬಂಧು ಬಳಗಕ್ಕೆ ಎಂದು ಹಪಾಹಪಿಯಿಂದ ಜೀವಿಸಿರುವವರೆಗೆ ಬಂಗಾರ ಭೂಮಿ ಹೆಣ್ಣು ಗಾಗಿ ಬಡಿದಾಡಿದರೆ ಏನು ಬಂತು? ಸತ್ತ ಮೇಲೆ ಅದು ಸಿಕ್ಕವರ ಪಾಲಾಗುತ್ತದೆ. ಆದ್ದರಿಂದ ಈ ಸಂಸಾರವೊಂದೇ ಸ್ಥಿರ ಎಂದು ಬಾಳಕೂಡದು. ಈ ಸಂಸಾರದಲ್ಲಿ ವ್ಯಕ್ತಿ ಸತ್ತ ಮೇಲೆ ಕೀರ್ತಿ ಬರುತ್ತದೆ; ವಾರ್ತೆ ಹಬ್ಬುತ್ತದೆ. ಜೀವಿಸಿ ಇರುವುದ ರಲ್ಲಿಯೇ ಒಳ್ಳೆಯ ಕಾರ್ಯ ಮಾಡಬೇಕು. ಕರ್ತನನ್ನು ಸ್ಮರಿಸಿ ಬಾಳಬೇಕು.

# ತನ್ನ ಪ್ರಾಪ್ತಿಯ ಫಲವ

ರಾಗ : ಮುಖಾರಿ, ಝಂಪೆತಾಳ

ತನ್ನ ಪ್ರಾಪ್ತಿಯ ಫಲವ ತಾನರಿಯದೆ
ಅನ್ಯರಿಗೆ ಆಡುವುದು ಅವಗುಣವು ಮರುಳೆ ॥ ಪ ॥

ಸರಸಿಜೋದ್ಭವನು ಪಣೆಯಲಿ ಬರೆದು ನಿರ್ಮಿಸಿದ
ತೆರೆನೊಂದು ಬೇರುಂಟು ತಾನರಿಯದೆ
ಕರಕೊಂಡು ಕಂಡವರ ಕೂಡ ತಾನಾಡಿದರೆ
ನೆರೆ ದುಃಖವಿದು ಬಿಟ್ಟು ಕಡೆಗೆ ತೊಲಗುವುದೆ ? ॥ ೧ ॥

ಬಡತನವು ಸಾಕೆಂದು ಸಿರಿತನವ ಬಯಸಿದರೆ
ಪಡೆದದ್ದು ಪೂರ್ವದಲಿ ಬೆನ್ನ ಬಿಡದು
ಅಡಿಗಡಿಗೆ ಶೋಕದಲಿ ಅವರಿವರಿಂಗುಸುರಿದರೆ
ಬಡತನವು ಬಿಟ್ಟು ಹಿಂಗುವುದೇನು ಮರುಳೆ ? ॥ ೨ ॥

ದೆಸೆಗೆಟ್ಟು ನಾಡದೈವಂಗಳಿಗೆ ಹಲುಬಿದೊಡೆ
ನೊಸಲ ಬರಹವ ತೊಡೆದು ತಿದ್ದಲಳವೆ ?
ವಸುಧೇಶ ಕಾಗಿನೆಲೆಯಾದಿಕೇಶವನಂಘ್ರಿ
ಬಿಸಜವನು ಕಂಡು ನೀ ಸುಖಿಯಾಗು ಮನುಜಾ ॥ ೩ ॥

ಅರ್ಥ : ನೊಸಲು=ಹಣೆ. ಅಂಘ್ರಿ=ಪಾದ. ಬಿಸಜ=ಕಮಲ.

ಭಾವ : ತನ್ನ ಜೀವನದ ಸುಖ ದುಃಖ ಸಿರಿವಂತಿಕೆ ಬಡತನಗಳಿಗೆ ತಾನೇ ಹೊಣೆ. ತಾನು ಮಾಡಿದ ಪುಣ್ಯ ಪಾಪಗಳ ಫಲಕ್ಕೆ ಇತರರನ್ನು ಹೊಣೆ ಮಾಡುವುದು ತಪ್ಪು. ತನ್ನ ಕಷ್ಟ, ಬಡತನಗಳ ನಿವಾರಣೆಗೆ ಕಂಡ ಕಂಡ ದೈವಗಳ ಮೊರೆಹೊಗಕೂಡದು. ತನ್ನ ಕಾರ್ಯಗಳೇ ತನ್ನ ಹಣೆಬರೆಹ ಬರೆಯುತ್ತವೆ. ಆದ್ದರಿಂದ ಪರಮಾತ್ಮನನ್ನು ನಂಬಿ ಸತ್ಯದ ಹಾದಿಯಲ್ಲಿ ನಡೆಯಬೇಕು.

# ತೀರ್ಥವನು ಪಿಡಿದವರೆಲ್ಲ

ರಾಗ: ಶಂಕರಾಭರಣ, ಆದಿತಾ

ತೀರ್ಥವನು ಪಿಡಿದವರೆಲ್ಲ ತಿರುನಾಮಧಾರಿಗಳೆ ಜನ್ಮ ‖ ಪ ‖
ಸಾರ್ಥಕವಿಲ್ಲದವರೆಲ್ಲ ಭಾಗವತರೆ ‖ ಅ ‖

ಮೂಗ್ಪಿಡಿದು ನೀರೊಳಗೆ ಮುಳುಗಿ ಜಪತಪ ಮಾಡಿ
ಭಾಗವತ ಶಾಸ್ತ್ರಾದಿಗಳನೆಲ್ಲ ಓದಿ
ಬಾಗಿ ಪರಸತಿಯರನು ಬಯಸಿ ಕಣ್ಣಿಡುವಂಥ
ನೀತಿ ತಪ್ಪಿದರೆಲ್ಲ ದೇವ ಬ್ರಾಹ್ಮಣರೆ ? ‖ ೧ ‖

ಪಟ್ಟೆನಾಮವ ಬಳಿದು ಪಾತ್ರೆ ಕೈಯಲಿ ಪಿಡಿದು
ಗುಟ್ಟಿನಲಿ ಜಪಿಸುವ ಗುರುತರಿಯದೆ
ಕೆಟ್ಟಕೂಗನು ಕೂಗಿ ಹೊಟ್ಟೆಯನು ಹೊರೆವಂಥ
ಹೊಟ್ಟೆಗುಡುಮಗಳೆಲ್ಲ ಪರಮ ವೈಷ್ಣವರೆ ? ‖ ೨ ‖

ಲಿಂಗಾಂಗದೊಳಗಿರುವ ಚಿನುಮಯವ ತಿಳಿಯದೆ
ಅಂಗಲಿಂಗದ ನೆಲೆಯ ಗುರುತರಿಯದೆ
ಜಂಗಮ ಸ್ಥಾವರದ ಹೊಲಬನರಿಯದ ಇಂಥ
ಭಂಗಿ ಮುಕ್ಕಗಳೆಲ್ಲ ಲಿಂಗವಂತರು ಅಹುದೆ ? ‖ ೩ ‖

ಅಲ್ಲಾ ಖುದಾ ಎಂಬ ಅರ್ಥವನು ಅರಿಯದೆ
ಮುಲ್ಲಾ ಶಾಸ್ತ್ರದ ನೆಲೆಯ ಗುರುತರಿಯದೆ
ಕಳ್ಳಕೂಗನೆ ಕೂಗಿ ಬೊಗಳಿ ಬಾಯ್ದೆರೆವಂಥ
ಕಳ್ಳರಿಗೆ ತಾ ವೀರಸ್ವರ್ಗ ದೊರಕುವುದೆ ? ‖ ೪ ‖

ವೇಷಭಾಷೆಯ ಕಲಿತು ಗೋಸನಿಯ ಕಡೆಗಿಟ್ಟು
ಆಸೆಯನು ತೊರೆಯದೆ ತಪವ ಮಾಡಿ
ವಾಸನೆಯ ಗುರುತಿನಾ ಹೊಲಬನರಿಯದ ಇಂಥ
ವೇಷಧಾರಿಗಳು ಸನ್ಯಾಸಿಗಳು ಅಹುದೆ ? ‖ ೫ ‖

ಆರು ಚಕ್ರದನೆಲೆಯ ಅಷ್ಟಾಂಗ ಯೋಗದೊಳು
ಮೂರು ಮೂರ್ತಿಯ ಮೂರುಕಡೆ ನಿಲಿಸಿ
ಕಾರುಣ್ಯನಿಧಿ ಕಾಗಿನೆಲೆಯಾದಿಕೇಶವನ
ಸೇರಿ ಭಜಿಸಿದವರಿಗೆ ಯಮನ ಬಾಧೆಯುಂಟೆ || ೬ ||

**ಅರ್ಥ :** ತಿರುನಾಮ=ಪವಿತ್ರನಾಮ (ಹಣೆಯಲ್ಲಿ ಧರಿಸುವುದು). ಹೊಟ್ಟೆಗುಡುಮ=ಬೊಜ್ಜು ಹೊಟ್ಟೆಯುವ. ಭಂಗಿಮುಕ್ಕ=ಗಾಂಜಿಬಡಕ, ಗಾಂಜಾ ಮುಕ್ಕುವವ. ಗೋಸನಿ= ಘೋಷಣೆ. ವಾಸನೆ=ವಿಷಯಾಸಕ್ತಿ. (ಅಷ್ಟಾಂಗಯೋಗ=ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿ).

**ಭಾವ :** ಧರ್ಮದ ನಿಜವಾದ ತತ್ವಗಳನ್ನು ಅರಿಯದೆ ಕೇವಲ ನಾಮ, ವಿಭೂತಿ ಇತ್ಯಾದಿ ಧರಿಸಿ ಹೊರಗಿನ ಆಡಂಬರಗಳನ್ನು ತೋರಿಸುತ್ತ ನೀತಿ ತಪ್ಪಿ ನಡೆದರೆ ಅವರು ಬ್ರಾಹ್ಮಣರೂ ಅಲ್ಲ; ಲಿಂಗವಂತರೂ ಅಲ್ಲ; ಮುಸಲ್ಮಾನರೂ ಅಲ್ಲ. ತತ್ವ ತಿಳಿದು ಮೌನವಾಗಿ ಆಚರಿಸಬೇಕು. ವಾಸನೆಗಳ ಗುಟ್ಟು ತಿಳಿದು ಆಸೆಗಳನ್ನು ಅಳಿಯ ಬೇಕು. ವೇಷಧಾರಿಯಾದಮಾತ್ರಕ್ಕೆ ಸನ್ಯಾಸಿಯಾಗಲಾರ. ಅಂತರಂಗದಲ್ಲಿ ತುಂಬಿರುವ ದೇವರನ್ನು ಮನಮುಟ್ಟಿ ಭಜಿಸಿದರೆ ಸಾವಿನ ಭಯವಿಲ್ಲ.

# ನನ್ನಿಂದ ನಾನೇ ಜನಿಸಿ

ರಾಗ: ಮುಖಾರಿ, ಅಟತಾಳ

ನನ್ನಿಂದ ನಾನೇ ಜನಿಸಿ ಬಂದೆನೆ ದೇವ || ಪ ||

ನಿನ್ನ ಪ್ರೇರಣೆಯಿಂದ ನಡೆದು ನುಡಿದ ಮೇಲೆ
ನಿನ್ನದು ತಪ್ಪೊ ಎನ್ನದು ತಪ್ಪೊ ಪರಮಾತ್ಮ || ಅ. ಪ ||

ಜನನಿಯ ಜಠರದಿ ನವಮಾಸವು
ಘನದಿ ನೀ ಪೋಷಿಸುತಿರೆ ನಾನು
ಜನಿಸಲಾರೆನು ಎನೆ ಜನಿಸೆಂದಿಕ್ಕಳದಿಂದೆ
ವನಜಾಕ್ಷ ನೂಕಿದವನು ನೀನಲ್ಲವೆ ದೇವ || ೧ ||

ಅಂಧಕನ ಕೈಯಲಿ ಕೋಲಿತ್ತು ಕರೆದೊಯ್ವ
ಮುಂದಾಳು ತಪ್ಪಿ ಗುಂಡಿಗೆ ಕೆಡಹಲು
ಅಂಧಕನ ತಪ್ಪೊ ಮುಂದಾಳಿನ ತಪ್ಪೊ
ಹಿಂದಾಡಬೇಡ ಎನ್ನಲಿ ತಪ್ಪಿಲ್ಲ || ೨ ||

ಕಂದನ ತಾಯಿಯು ಆಡಿಸುತಿರೆ ಪೋಗಿ
ಕಂದ ಬಾವಿಯ ಕಂಡು ನೋಡುತಿರೆ
ಬಂದು ಬೇಗದಿ ಬಿಗಿದಪ್ಪದಿರಲು ಆ
ಕಂದನ ತಪ್ಪೋ ಮಾತೆಯ ತಪ್ಪೋ ಪರಮಾತ್ಮ || ೩ ||

ಭಾರ ನಿನ್ನದೊ ದೂರು ನಿನ್ನದೊ ಕೃಷ್ಣ
ನಾರಿ ಮಕ್ಕಳು ತನು ಮನ ನಿನ್ನವಯ್ಯ
ಕ್ಷೀರದೊಳಗದ್ದು ನೀರೊಳಗದ್ದು ಗೋವಿಂದ
ಹೇರನೊಪ್ಪಿಸಿದ ಮೇಲೆ ಸುಂಕವೇತಕೆ ದೇವ || ೪ ||

ನ್ಯಾಯವಾದರೆ ದುಡುಕು ನಿನ್ನದೊ ಮತ್ತ
ನ್ಯಾಯವಾದರೆ ಪೇಳುವವರಾರು ?
ಕಾಯಜ ಪಿತ ಕಾಗಿನೆಲೆಯಾದಿಕೇಶವ
ರಾಯ ನೀ ಕಾಯಯ್ಯ ತಪ್ಪುಗಳೆಣಿಸದೆ || ೫ ||

ಅರ್ಥ: ಅಂಧಕ=ಕುರುಡ. ಹೇರು=ಸರಕು, ಹೊರೆ. ಕಾಯಜ=ಕಾಮ.

ಭಾವ: ಮಾನವ ಈ ಭೂಮಿಯಲ್ಲಿ ಹುಟ್ಟಿ ಬಂದುದೇ ದೇವರ ಪ್ರೇರಣೆಯಿಂದ. ಆದುದರಿಂದ ಮಾನವ ಮಾಡಿದ ತಪ್ಪು ಒಪ್ಪು ಎಲ್ಲರೂ ದೇವರದೇ. ಕುರುಡನ ಕೈಗೆ ಕೋಲು ಕೊಟ್ಟು ಮುಂದೆ ನಡೆಸುವ ಮುಂದಾಳು ತಪ್ಪಿ ಅವನನ್ನು ತಗ್ಗಿಗೆ ಕೆಡವಿದರೆ ಅದರಲ್ಲಿ ಮುಂದಾಳುವಿನದೇ ತಪ್ಪು. ಪರಮಾತ್ಮ ತಾಯಿ ಇದ್ದಂತೆ. ಎಲ್ಲವನ್ನೂ ಆತನಿಗೇ ಬಿಟ್ಟುಬಿಡಬೇಕು. ಹಾಲಲ್ಲಾದರೂ ಅದ್ದಲಿ, ನೀರಲ್ಲಾದರೂ ಅದ್ದಲಿ. ಹೀಗೆ ನಾನು ನನ್ನದು ಎನ್ನುವ ಇಡೀ ಹೇರನ್ನು ಆತನಿಗೆ ಅರ್ಪಿಸಿದರೆ ಎಲ್ಲದಕ್ಕೂ ಆತನೇ ಹೊಣೆಗಾರನಾಗುತ್ತಾನೆ; ತನ್ನನ್ನು ಪರಮಾತ್ಮನಿಗೆ ಸಮರ್ಪಿಸಿಕೊಂಡ ಭಕ್ತನ ಸವಾಲು ಇಲ್ಲಿದೆ.

# ನಾರಾಯಣ ಎಂಬ ನಾಮದ

ರಾಗ: ಕಾಂಬೋದಿ, ಝಂಪೆತಾಳ

ನಾರಾಯಣ ಎಂಬ ನಾಮದ ಬೀಜವನು ನಾಲಿಗೆಯಾ
ಕೂರಿಗೆಯ ಮಾಡಿ ಬಿತ್ತಿರಯ್ಯಾ ॥ ಪ ॥

ಹೃದಯ ಹೊಲವನು ಮಾಡಿ ತನುವ ನೇಗಿಲ ಮಾಡಿ
ತನ್ವಿರಾ ಎಂಬ ಎರಡೆತ್ತ ಹೂಡಿ
ಜ್ಞಾನವೆಂಬೊ ಮಿಣಿಯ ಕಣ್ಣಿ ಹಗ್ಗವ ಮಾಡಿ
ಮನವೆಂಬ ಧಾನ್ಯವ ನೋಡಿ ಬಿತ್ತಿರಯ್ಯಾ ॥ ೧ ॥

ಕಾಮ ಕ್ರೋಧಗಳೆಂಬ ಗಿಡವನು ತರಿಯಿರಯ್ಯಾ
ಮದಮತ್ಸರವೆಂಬ ಪೊದೆಯ ಇರಿಯಿರಯ್ಯಾ
ಪಂಚೇಂದ್ರಿಯಗಳೆಂಬ ಮಂಚಿಕೆಯ ಹಾಕಿರಯ್ಯಾ
ಚಂಚಲವೆಂಬ ಹಕ್ಕಿಯ ಓಡಿಸಿರಯ್ಯಾ ॥ ೨ ॥

ಉದಯಾಸ್ತಮಾನವೆಂಬ ಎರಡು ಕೊಳಗವ ಮಾಡಿ
ಆಯುಷದ ರಾಸಿಯನು ಅಳೆಯಿರಯ್ಯಾ
ಇದು ಕಾರಣ ಕಾಗಿನೆಲೆಯಾದಿ ಕೇಶವನ
ಮುದದಿಂದ ನೆನೆನೆನೆದು ಸುಖಿಯಾಗಿರಯ್ಯಾ ॥ ೩ ॥

**ಅರ್ಥ:** ತನ್ವಿರಾ=(ತನುವಿನ) ಉಸಿರು? ಶ್ವಾಸ ಮತ್ತು ಉಚ್ವಾಸಗಳ ಚಲನೆ. ಈ ಎರಡೂ ಎತ್ತು ಎನ್ನುವ ಹೋಲಿಕೆ. ಪೊದೆ=ಗಿಡಗಂಟೆಗಳ ಗುಂಪು. ಮಂಚಿಕೆ=(ಹೊಲದಲ್ಲಿ ಹಕ್ಕಿ ಹಾರಿಸಲು ಹಾಕುವ) ಅಟ್ಟಣೆ. ಕೊಳಗ=ಅಳೆಯುವ ಮಾಪು.

**ಭಾವ:** ದೇವರನ್ನು ಸದಾ ನೆನೆದು ಆನಂದದಿಂದ ಇರಬೇಕು. ದೇವರೆಂದರೆ ಅಂತರಂಗದಲ್ಲಿರುವ ಬೆಳೆ. 'ನಾರಾಯಣ' ಬೀಜ ಬಿತ್ತಬೇಕು. ನಾಲಿಗೆಯೇ ಕೂರಿಗೆ. ಹೃದಯವೇ ಹೊಲ. ಶರೀರವೇ ನೇಗಿಲು. ಉಸಿರಿನ ಚಲನೆಯೇ ಎತ್ತು. ಜ್ಞಾನ–ಅರಿವು–ಕಣ್ಣಿ ಹಗ್ಗ. ಕಾಮ ಕ್ರೋಧ ಮದ ಮತ್ಸರಾದಿಗಳನ್ನು ಬಿಡಬೇಕು. ಇಂದ್ರಿಯಗಳ ಅಟ್ಟಣೆ ಹಾಕಿ ಚಂಚಲತೆಯನ್ನು ಓಡಿಸಬೇಕು. ಮನದಲ್ಲಿ ಬಿತ್ತಿ ಹೃದಯ ತುಂಬಿ ಬೆಳೆಯುವ ಫಸಲು ದೇವರು. ಬೆಳಗು ಸಂಜೆ ಎಂಬ ಎರಡು 'ಮಾಪ'–ಕೊಳಗ–ದಲ್ಲಿ ಆಯುಷ್ಯ ಮುಗಿಯುತ್ತದೆ. ಆದ್ದರಿಂದ ಜೀವನವನ್ನು ಹಾಳು ಮಾಡಕೂಡದು. ಸಂತೋಷದಿಂದ ದೇವರನ್ನು ಸ್ಮರಿಸಿ ಸುಖಿಗಳಾಗಬೇಕು.

# ನಾರಾಯಣ ನಿನ್ನ ನಾಮ

ರಾಗ: ಅರಭಿ, ಅಟತಾಳ

ನಾರಾಯಣ ನಿನ್ನ ನಾಮವೊಂದಿರುತಿರೆ
ಬೇರೊಂದು ನಾಮವಿನ್ನೇತಕಯ್ಯ ‖ ಪ ‖

ನೆಟ್ಟನ ದಾರಿಯು ಬಟ್ಟೆಯೊಳಿರುತಿರೆ
ಬೆಟ್ಟವ ಬಳಸಲಿನ್ನೇತಕಯ್ಯ
ಅಷ್ಟೈಶ್ವರ್ಯದ ಮೃಷ್ಟಾನ್ನವಿರುತಿರೆ
ಬಿಟ್ಟಿ ಕೂಳನು ತಿನ್ನಲೇತಕಯ್ಯಾ ‖ ೧ ‖

ಪರಶು ನೇವಾಳಂಗಳಿರುತಿರೆ ಬೀದಿಯ
ಬರಿಗಲ್ಲ ತೊಳೆಯಲಿನ್ನೇತಕಯ್ಯ
ಹರಿವಾಣದೊಳಗಮೃತಾನ್ನವು ಇರುತಿರೆ
ತಿರಿದ ಕೂಳನು ತಿನ್ನಲೇತಕಯ್ಯ ‖ ೨ ‖

ಬೆಲ್ಲವು ಕರದೊಳಗಿರುತಿರೆ ಕಾಡಿನ
ಕಲ್ಲನು ಕಡಿಯಲಿನ್ನೇತಕಯ್ಯಾ
ಬಲ್ಲಿದ ಕಾಗಿನೆಲೆಯಾದಿಕೇಶವನಿರೆ
ಚಿಲ್ಲರೆ ದೈವದ ಹಂಬಲೇತಕಯ್ಯ ‖ ೩ ‖

ಅರ್ಥ: ಬಟ್ಟೆ=ದಾರಿ. ಪರಶುನೇವಾಳ=ಪರುಷಮಣಿಯ ಹಾರ. ಸ್ಪರ್ಶ=ಪರುಷ, ಪರಶು.

ಭಾವ: ಪರಮಾತ್ಮನ ನಾಮಸ್ಮರಣೆ ಮನವನ್ನು ಶುದ್ಧಗೊಳಿಸುತ್ತದೆ. ಒಂದು ದೈವವನ್ನು–ನಾರಾಯಣ–ನಂಬಿ ನಡೆದರೆ ಅದೇ ಶ್ರೇಷ್ಠ.

ಒಳ್ಳೆಯ ದಾರಿಯಲ್ಲಿ ನಡೆಯಬೇಕು; ಉತ್ತಮ ಜೀವನ ನಡೆಸಬೇಕು. ಪರಮಾತ್ಮನ ಸ್ಮರಣೆ ಮಾಡುತ್ತ ನೆಟ್ಟನೆಯ ದಾರಿಯಲ್ಲಿ ನಡೆಯುವವನಿಗೆ ಅದೇ ತಿರುಪತಿ; ಅಷ್ಟೈಶ್ವರ್ಯ, ಮೃಷ್ಟಾನ್ನ, ಪರುಷನೇವಾಳ, ಎಲ್ಲವೂ. ಆದ್ದರಿಂದ ನೂರೆಂಟು ಚಿಲ್ಲರೆದೈವಗಳ ಹಂಬಲ ಬಿಡಬೇಕು. ಆದಿಕೇಶವನನ್ನು ನಂಬಬೇಕು.

# ನೀನೇನ ಮಾಡಲಾಪೆ ರಂಗಯ್ಯ

ರಾಗ : ಪಂತುವರಾಳಿ, ಛಾಪುತಾ

ನೀನೇನ ಮಾಡಲಾಪೆ ರಂಗಯ್ಯ ನಾ
ಮುನ್ನ ಮಾಡಿದ ಫಲವಿದೆ ಸಾಕು || ಪ

ನಾನಾ ಜನ್ಮದಿ ಯೋನಿ ಮುಖದಿಂದ ಬಾಹೊ
ಹೀನವನು ನೀ ಕಳೆಯಲಾಪೆಯ ರಂಗ
ನೀನೇ ನಿಜವೆಂದು ನಿನ್ನ ಧೇನಿಸಿದರೆ ಅ-
ಜ್ಞಾನಕ್ಕೆ ಅಡ್ಡ ಬರಲಾಪೆಯಾ ರಂಗ ? || ೧ |

ಸಂಚಿತದ ಪ್ರಾರಬ್ಧದೊಳಗೊಂದು
ಕಿಂಚಿತಾದರು ಕಳೆಯಲಾಪೆಯಾ ರಂಗ ?
ಪಂಚೇಂದ್ರಿಯಗಳು ತಮ್ಮ ದೆಸೆದೆಸೆಗಳೆವಾಗ
ವಂಚನೆಯಿಲ್ಲದೆ ಅಡ್ಡ ಬರಲಾಪೆಯಾ ರಂಗ ? || ೨ |

ಸರಸಿಜೋದ್ಭವಗೆ ಬುದ್ಧಿಯ ಪೇಳಿ ಪಣೆಯಲ್ಲಿ
ಬರೆದ ಅಕ್ಷರವ ತೊಡೆಯಲಾಪೆಯಾ ರಂಗ ?
ಪರಬ್ರಹ್ಮ ಕಾಗಿನೆಲೆಯಾದಿಕೇಶವನ
ಸ್ಮರಣೆಗೈಯ್ಯಲು ಕಾಯದಿರಲಾಪೆಯಾ ರಂಗ || ೩ |

ಅರ್ಥ : ಸರಸಿಜೋದ್ಭವ=ಬ್ರಹ್ಮ. ತೊಡೆ=ಅಳಿಸು, ಅಳುಕಿಸು. ಸಂಚಿತ=ಸಂಗ್ರಹಿಸಿದ.

ಭಾವ : ಮಾನವ ಒಳ್ಳೆಯ ಕಾರ್ಯ ಮಾಡಬೇಕು. ಒಳ್ಳೆಯ ಕರ್ಮಗಳ ಫಲ ಒಳ್ಳೆಯ ದಾಗಿರುತ್ತದೆ; ಅದೇ ಕೂಡಿಕೊಂಡು ಬಂದ (ಸಂಚಿತ) ಫಲ. ಮರವೆ, ಅಜ್ಞಾನ ಅಹಂಕಾರಗಳಿಂದ ನಡೆದು ಹೀನನಾಗಿ ಬದುಕಿದರೆ ಅದಕ್ಕೆ ಪರಮಾತ್ಮ ಏನೂ ಮಾಡಲಾರ; ಅಂಥವರನ್ನು ರಕ್ಷಿಸಲಾರ. ಹಣೆಯುಬರಹವನ್ನು ಯಾರೂ ಅಳಿಸ ಲಾರರು. ಪರಮಾತ್ಮನ ಸ್ಮರಣೆ ಮಾಡಿದರೆ ಆತ ನಮ್ಮನ್ನು ರಕ್ಷಿಸುತ್ತಾನೆ.

# ನೆಚ್ಚದಿರು ಸಂಸಾರ ನೆಲೆಯಲ್ಲವೀಕಾಯು

ರಾಗ : ಕಲ್ಯಾಣಿ, ಝಾಪುತಾಳ

ನೆಚ್ಚದಿರು ಸಂಸಾರ ನೆಲೆಯಲ್ಲವೀಕಾಯು
ಅಚ್ಯುತನ ನಾಮವನು ನೆನೆದು ಸುಖಿಯಾಗೊ || ಪ ||

ಗಳಿಸದಿರು ಸೀಮೆಯಸು ಗಳಿಸದಿರು ದ್ರವ್ಯವನು
ಗಳಿಸದಿರು ನೀ ದುರಿತ ರಾಶಿಗಳನು
ನಳಿನನಾಭನ ದಿವ್ಯನಾಮವನು ನೆನೆನೆನೆದು
ನೆಲೆಯಾದ ಪರಮ ಪದವಿಯ ಪಡೆಯೊ ಮನವೆ || ೧ ||

ನೋಡದಿರು ಪರಸತಿಯ ಕೂಡದಿರು ದುರ್ಜನರ
ಆಡದಿರು ಮಾತುಗಳ ಗರ್ವದಿಂದ
ಬೇಡದಿರು ಕೈಯ ಹಿಂದೆಗೆವ ಹೇಡಿಯನು ಕೊಂ-
ಡಾಡದಿರು ಬೀದಿಗೂಳುಂಬ ದೈವಗಳ || ೨ ||

ನಾನಾ ಜನ್ಮದಿ ಬಂದ ನಾಟಕದ ಬೊಂಬೆಯಿದು
ಮಾನಕ್ಕೆ ಮೆಚ್ಚಿ ನೀ ಮರುಳಾಗದೆ
ಜಾಣತನದಿಂದ ಕಾಗಿನೆಲೆಯಾದಿಕೇಶವನ
ಮಾನಸದಿ ನೆನೆನೆನೆದು ಸುಖಿಯಾಗೊ ಮನವೆ || ೩ ||

ಅರ್ಥ : ದುರಿತ=ಪಾಪ, ಕೆಟ್ಟ ಕೆಲಸ.

ಭಾವ : ದೇವರ ಸ್ಮರಣೆ, ಭಜನೆಗಳಿಲ್ಲದೆ ಕೇವಲ ಸಂಸಾರ ಸುಖಭೋಗಗಳಲ್ಲಿ ಜೀವನ ಹಾಳು ಮಾಡಿಕೊಳ್ಳಬಾರದು. ಹೊಲ ಮನೆ ಸಂಪತ್ತು ಗಳಿಸುವುದು, ಸೊಕ್ಕಿನಿಂದ ಮಾತಾಡುವುದು, ಕೇಡಿಗಳ ಸಹವಾಸ ಇಂಥದರಲ್ಲಿ ತೊಡಗಬಾರದು. ದೇವರ ದಿವ್ಯ ನಾಮ ನೆನೆದು ಆನಂದ ಹೊಂದಬೇಕು; ಸುಖಿಗಳಾಗಬೇಕು.

# ನೇಮವಿಲ್ಲದ ಹೋಮ

ರಾಗ: ಮುಖಾರಿ, ಝಂಪೆತಾ

ನೇಮವಿಲ್ಲದ ಹೋಮವೇತಕಯ್ಯ ರಾಮ
ನಾಮವಿಲ್ಲದೆ ಮತ್ತೆ ನಮಗೆ ಬೇರೊಂದೆ? ||ಪ||

ನೀರು ಮುಳುಗಲು ಏಕೆ ನಾರಿಯನು ಬಿಡಲೇಕೆ
ವಾರಕೊಂದುಪವಾಸವಿರಲೇತಕೆ
ನಾರಸಿಂಹನ ದಿವ್ಯನಾಮವನು ನೆನೆದರೆ
ಘೋರಪಾತಕವೆಲ್ಲ ತೊಲಗಿ ಪೋಗುವುದು ||೧||

ಅಂಬರ ತೊರೆಯಲೇಕೆ ತಾಂಬೂಲ ಬಿಡಲೇಕೆ
ಡಂಭತನದಲ್ಲಿ ನೀನಿರಲೇತಕೆ?
ಅಂಭೋಜನಾಭನನು ಭಾವದಲಿ ನೆನೆದರೆ
ಇಂಬುಂಟು ವೈಕುಂಠ ಪುರದೊಳಗೆ ಅಯ್ಯ ||೨||

ಬಂಧದೊಳಗೇ ಬಿದ್ದು ಹರಿಯನೇ ನೆನೆಯುತಿರೆ
ಬೆಂದುಹೋಗುವುವು ದುರಿತಂಗಳೆಲ್ಲ
ಬಂದ ದುಃಖಗಳೆಲ್ಲ ನಿಲ್ಲದಲೆ ಕಳೆಯುವುವು
ಚೆಂದಾಗಿ ಕಾಗಿನೆಲೆಯಾದಿಕೇಶವನ ನೆನೆ ||೩||

ಅರ್ಥ: ಅಂಬರ=ಬಟ್ಟೆ.

ಭಾವ: ಭಕ್ತನಿಗೆ ದೇಹದಂಡನೆ ಅನಗತ್ಯ. ಧರ್ಮಸಮ್ಮತವಾದ ಲೌಕಿಕ ಸುಖಗಳು ತ್ಯಾಜ್ಯವಲ್ಲ. ದೈವಭಕ್ತಿಯಿಲ್ಲದ ನೇಮ ಜಪತಪಗಳು ವ್ಯರ್ಥ. ದೇವರ ನಾಮ ನಮ್ಮನ್ನು ಪಾರು ಮಾಡುವ ಆಧಾರ. ದೃಢಭಕ್ತಿಯಿದ್ದರೆ ಈ ಸಂಸಾರ ಬಂಧನ ಕಾರಿಯಲ್ಲ; ದುಃಖಮಯ ಅಲ್ಲ. ದೇವರ ನಿತ್ಯಸ್ಮರಣೆಯಿಂದ ಪಾಪ ಸುಟ್ಟು ಹೋಗುತ್ತದೆ; ದುಃಖ ನಾಶವಾಗುತ್ತದೆ. ಶಾಂತಿ ಸುಖ ಪ್ರಾಪ್ತವಾಗುತ್ತವೆ.

# ಬದುಕಿದೆನು ಬದುಕಿದೆನು

ರಾಗ: ಮುಖಾರಿ, ಝಂಪೆತಾಳ

ಬದುಕಿದೆನು ಬದುಕಿದೆನು ಭವ ಎನಗೆ ಹಿಂಗಿತು ॥ ಪ ॥
ಪದುಮನಾಭನ ಪಾದದೊಲುಮೆ ಎನಗಾಯಿತು ॥ ಅ ॥

ಹರಿತೀರ್ಥ ಪ್ರಸಾದ ಎನ್ನ ಜಿಹ್ವೆಗೊದಗಿತು
ಹರಿಯ ನಾಮಾಮೃತ ಕಿವಿಗೊದಗಿತು
ಹರಿಯದಾಸರು ಎನ್ನ ಬಂಧು ಬಳಗಾದರು
ಹರಿಯ ಶ್ರೀಮುದ್ರೆ ಆಭರಣವಾಯಿತು ॥ ೧ ॥

ಮುಕುತರಾದರು ಎನ್ನ ನೂರೊಂದು ಕುಲದವರು
ಮುಕುತಿ ಮಾರ್ಗಕೆ ಯೋಗ್ಯ ನಾನಾದೆನೊ
ಅಕಳಂಕ ಶ್ರೀಹರಿ ಭಕುತಿಗೆ ಮನ ಬೆಳೆದು
ರುಕುಮಿಣಿಯರಸ ಕೈವಶನಾದನೆನಗೆ ॥ ೨ ॥

ಇಂದೆನ್ನ ಜೀವಕ್ಕು ಸಕಲ ಸಂಪದವಾಯ್ತು
ಮುಂದೆನ್ನ ಜನ್ಮ ಸಫಲವಾಯಿತು
ತಂದೆ ಶ್ರೀ ಕಾಗಿನೆಲಿಯಾದಿಕೇಶವರಾಯ
ಬಂದೆನ್ನ ಹೃದಯದಲಿ ನೆಲೆಯಾಗಿ ನಿಂತ ॥ ೩ ॥

**ಅರ್ಥ:** **ಜಿಹ್ವೆ**=ನಾಲಗೆ.

ಭಾವ: ತನ್ನ ಎಲ್ಲ ಇಂದ್ರಿಯಗಳಲ್ಲಿ ದೇವರು ತುಂಬಿದ ಅನುಭವ. ಆಗ ಪ್ರಪಂಚದ ಕಷ್ಟ ಕೋಟಲೆಗಳು ದೂರಾಗುತ್ತವೆ. ದೇವನ ಕರುಣೆ ಪ್ರೀತಿ ದೊರೆಯುತ್ತದೆ. ಆ ಕುಲ ಈ ಕುಲ ಎನ್ನುವ ಭೇದ ಅಳಿಯುತ್ತದೆ. ಎಲ್ಲರೂ ದೇವರ ಮಕ್ಕಳು, ಸಮಾನರು ಎನ್ನುವ ಅರಿವು ಮೂಡುತ್ತದೆ. ಇದು ಭಕ್ತಿಯ ದಾರಿ; ನೀತಿ. ಆಗ ಜನ್ಮ ಸಫಲ. ದೇವರು ತಂದೆಯು ಅಂತಃಕರಣ ರೂಪ ತಾಳಿ ಎಲ್ಲರ ಹೃದಯದಲ್ಲಿ ನೆಲೆಸುತ್ತಾನೆ.

# ಬಾಯಿ ನಾರಿದ ಮೇಲೆ ಏಕಾಂತವೆ ?

ರಾಗ: ಕಾಂಬೋಧಿ, ಝಂಪೆತಾ

ಬಾಯಿ ನಾರಿದ ಮೇಲೆ ಏಕಾಂತವೆ ?
ತಾಯಿ ತೀರಿದ ಮೇಲೆ ತವರಾಸೆಯೆ ? || ಪ ||

ಕಣ್ಣು ಕೆಟ್ಟಾ ಮೇಲೆ ಕಡುರೂಪ ಚೆಲ್ವಿಕೆಯೆ
ಬಣ್ಣಗುಂದಿದ ಮೇಲೆ ಬಹುಮಾನವೆ ?
ಪುಣ್ಯ ತೀರಿದ ಮೇಲೆ ಪರಲೋಕ ಸಾಧನವೆ
ಸುಣ್ಣವಿಲ್ಲದ ವೀಳ್ಯವದು ಸಾರಸಮುವೆ ? || ೧ ||

ಕಿಲುಬಿನಾ ಬಟ್ಟಲೊಳು ಹುಳಿಕಲಸಿ ಉಣಬಹುದೆ
ಚಳಿಜ್ವರಕೆ ಚಂದನದ ಲೇಪ ಹಿತವೆ
ಮೊಲೆ ಬಿದ್ದ ಹೆಣ್ಣಿನೊಳು ಮೋಹಕ್ಕೆ ಸೊಗಸಹುದೆ
ಬೆಲೆಬಿದ್ದ ಸರಕಿನೊಳು ಲಾಭ ಉಂಟೆ || ೨ ||

ಪಥ್ಯ ಸೇರದ ಮೇಲೆ ನಿತ್ಯ ಸುಖವೆನಬಹುದೆ
ಸತ್ವ ತಗ್ಗಿದ ಮೇಲೆ ಸಾಮರ್ಥ್ಯವೆ
ಪೃಥ್ವಿಯೊಳು ಕಾಗಿನೆಲೆಯಾದಿಕೇಶವ ನಿನ್ನ
ಭಕ್ತಿ ಇಲ್ಲದವಗೆ ಮುಕ್ತಿಯುಂಟೆ || ೩ ||

ಭಾವ : ಎಲ್ಲ ಶಕ್ತಿ ಕುಗ್ಗಿ ಮುಪ್ಪು ಅಡರಿದ ಬಳಿಕ ಮನುಷ್ಯನಿಂದ ಉದಾತ್ತವಾದುದನ್ನು ಒಳ್ಳೆಯದನ್ನು ಸಾಧಿಸಲು ಸಾಧ್ಯವಾಗುವುದಿಲ್ಲ. ತನ್ನಲ್ಲಿ ಶಕ್ತಿ ಇರುವಾಗಲೇ ಭಕ್ತಿವಂತನಾಗಿ ಶುದ್ಧ ಜೀವನ ನಡೆಸಬೇಕು. ಅದು ನಿಜವಾದ ಮುಕ್ತಿ ; ಮುಕ್ತಿಗೆ ದಾರಿ.

# ಬೊಂಬೆಯಾಟವನಾಡಿಸಿದ

ರಾಗ : ಮುಖಾರಿ, ಝಂಪೆತಾಳ

ಬೊಂಬೆಯಾಟವನಾಡಿಸಿದ ಮಹಾಭಾರತವ
ಅಂಬುಜ ಭವಾದಿಯಾದವರು ಈಕ್ಷಿಸಲು || ಪ ||

ಕುರುಭೂಮಿಯೆಂಬ ಪುರವೀದಿ ರಂಜಿಸಲು
ಮರೆಯ ಮಾಯದ ಐದು ತೆರೆಯ ಹಾಕಿ
ಧರಣೀಶರೆಂಬ ನರಪ್ರತಿಮೆಗಳ-ನಳವಡಿಸಿ
ನರನ ಹಯರಥದ ವಾಘೆಯ ಸೂತ್ರವಿಡಿದು || ೧ ||

ಓದುವನು ನಾರದನು ವಾದ್ಯಕಾರನು ಶಂಭು
ಬಾದರಾಯಣನೇ ಕತೆಗಾರನು
ಮೇದಿನಿಯ ಹೊರಗೆಳೆವ ಮೃತ್ಯುವಿನ ಹಾಸ್ಯರಸ
ವೇದನಿಕರಗಳು ಕೈವಾರಿಸುತಲಿರಲು || ೨ ||

ಹದಿನೆಂಟು ಅಕ್ಷೋಣಿ ಮಾರ್ಬಲವ ಹದಿನೆಂಟು ದಿನ
ಕದನ ನಾಟ್ಯದ ಕೇಳಿಕೆಯನಾಡಿಸಿ
ಅದರೊಳೈವರನುಳುಹಿ ಅವನಿಭಾರವನಿಳುಹಿ
ಮುದದಿ ಬ್ರಹ್ಮನ ಕಪಾಲವ ಸಿದ್ಧಗೊಳಿಸಿ || ೩ ||

ಲೋಕದೊಳು ಐದನೆಯ ವೇದವೀಕಥೆಯೆನಿಸಿ
ಪಾಕಶಾಸನನ ಸಭೆಯನು ಮೆಚ್ಚಿಸಿ
ಈ ಕಥೆಯ ಕೇಳ್ದ ಜನಮೇಜಯನ ಪತಿಕರಿಸಿ
ತಾ ಕಪಟ ನಾಟಕದ ಸೂತ್ರಧರನೆನಿಸಿ || ೪ ||

ಇಂತೆಸೆವ ಲೀಲಾವಿನೋದ ರಚನೆಯಲಿ ಲೋ-
ಕಾಂತರಗಳೆಲ್ಲವನು ಸಂತೈಸುವ
ಸಂತತವು ಭಕ್ತ ಸಂಸಾರವನು ಪೊರೆವ ವೇ-
ದಾಂತನುತ ಕಾಗಿನೆಲೆಯಾದಿಕೇಶವರಾಯ || ೫ ||

ಅರ್ಥ : ಈಕ್ಷಿಸು=ನೋಡು. ವಾಘೆ=ಕಡಿವಾಣ. ಕೈವಾರಿಸು=ಹೊಗಳು. ಕೇಳಿಕೆ=ಬಯಲಾಟ. ಪಾಕಶಾಸನ=ಇಂದ್ರ. ಪತಿಕರಿಸು=ದಯತೋರು.

ಭಾವ : ಪರಮಾತ್ಮನು ಬೊಂಬೆಯಾಟ ಆಡಿಸುವ ಸೂತ್ರಧಾರ. ಮಹಾಭಾರತ ಮುಂತಾದ ಕಥೆಗಳನ್ನು ರೂಪಿಸಿ ಆಡಿಸುತ್ತಾನೆ. ದಿನದಿನವೂ ಈ ಆಟ ನಡೆಯುತ್ತದೆ. ಈ ಜಗತ್ತು ಆ ಆಟಕ್ಕೆ ರಂಗಭೂಮಿ. ಪಂಚೇಂದ್ರಿಯಗಳೇ ಐದು ತೆರೆ. ಮಾನವರು ಕುದುರೆ ರಥ ಇತ್ಯಾದಿ ನಾನಾ ಬಗೆಯ ಗೊಂಬೆ. ನಾರದ ಓದುತ್ತಾನೆ; ಶಂಭು ಮದ್ದಳೆಕಾರ; ಬಾದರಾಯಣನೇ ಕತೆಗಾರ. ಈ ಜಗತ್ತಿನ ಅಸ್ಥಿರತೆಯನ್ನು ಬಯಲು ಮಾಡುವ ಸಾವು ಹಾಸ್ಯಗಾರ. (ಸಾರಥಿ, ಹನುಮನಾಯಕ) ಮಹಾಭಾರತಕ್ಕೆ ಐದನೆಯ ವೇದ ಎಂದು ಕರೆಯಲಾಗುತ್ತದೆ. ಅಂಥ ನಾಟಕ ಲೀಲಾ ವಿನೋದಗಳನ್ನು ಆಡಿಸುತ್ತ ಭಕ್ತರನ್ನು ರಕ್ಷಿಸುತ್ತಾನೆ ಪರಮಾತ್ಮ.

# ಮರೆಯದಿರು

ರಾಗ : ಸಾರಂಗ, ಅಟತಾಳ

ಮರೆಯದಿರು ಮರೆಯದಿರು ಮರುಳು ಮನುಜಾ
ನಾರಾಯಣ ಸ್ಮರಣೆಯನು ಮಾಡು ಮನುಜಾ ‖ ಪ ‖

ರಂಗನಾಥನು ಇರಲಿಕ್ಕೆ ಜಂಗುಳಿ ದೈವಗಳೇಕೆ
ತುಂಗಭದ್ರೆ ಇರಲಿಕ್ಕೆ ಬಾವಿ ಕೆರೆಯೇಕೆ ?
ಅಂಗನೆ ಸತಿ ಇರಲಿಕ್ಕೆ ಬಣಗು ಹೆಣ್ಣುಗಳೇಕೆ ?
ಮಂಗಳಾತ್ಮನಿರಲಿಕ್ಕೆ ಪರದೈವವೇಕೆ ? ‖ ೧ ‖

ಹಾಲು ಹಳ್ಳವಿರಲಿಕ್ಕೆ ವಾಳಿಯುವ ತರಲೇಕೆ
ಮೇಲು ನಾಮವಿರಲಿಕ್ಕೆ ಕಟಕು ಇನ್ನೇಕೆ ?
ಬಾಲ ಹನುಮನಿರಲಿಕ್ಕೆ ಹುಲ್ಲು ಕಪಿಗಳೇಕೆ
ಮೇಲಾದ ತುಳಸಿಯಿರೆ ಕಗ್ಗೊರಲೆಯೇಕೆ ? ‖ ೨ ‖

ಚಿನ್ನದ ಗಿರಿಯಿರಲಿಕ್ಕೆ ಕಬ್ಬಿಣದ ಮೊರಡಿಯೇಕೆ
ರನ್ನಮಾಣಿಕವಿರಲಿಕ್ಕೆ ಕಾಜಿನ ಹರಳೇಕೆ ?
ಅನ್ನ ತುಪ್ಪವಿರಲಿಕ್ಕೆ ಮದ್ಯಪಾನಗಳೇಕೆ
ಚೆನ್ನಾದಿಕೇಶವನಿರೆ ಬಿನುಗುದೈವಗಳೇಕೆ ? ‖ ೩ ‖

ಅರ್ಥ : ಜಂಗುಳಿ=ಹಿಂಡು. ವಾಳಿ(ಯು)=ಗೊಡ್ಡು ? ಕಟಕು=ಹಿಟ್ಟುಗಲ್ಲು. ಕಗ್ಗೊರಲೆ= ನವಣೆಯಂತಹ ಒಂದು ಧಾನ್ಯ. ಮೊರಡಿ=ದಿನ್ನೆ. ಬಿನುಗು=ಕ್ಷುದ್ರ.

ಭಾವ : ದೇವನು ಒಬ್ಬನೇ ಎಂದು ನಂಬಿ ನಡೆಯಬೇಕು. ಕಂಡ ಕಂಡ ಹಿಂಡು ದೈವಗಳಿಗೆ ಬಾಗಬಾರದು. ನಾರಾಯಣನ ಪುಣ್ಯನಾಮವನ್ನು ಸ್ಮರಿಸಿ ಜೀವನ ಪಾವನ ಮಾಡಿಕೊಳ್ಳಬೇಕು.

# ಮುತ್ತು ಬಂದಿದೆ ಕೇರಿಗೆ

ರಾಗ : **ಸಾವೇರಿ, ಅಟತಾಳ**

**ಮುತ್ತು ಬಂದಿದೆ ಕೇರಿಗೆ ಜನರು ಕೇಳಿ** ‖ ಪ ‖
**ಭಕ್ತಿಯುಳ್ಳವರೆಲ್ಲ ಕಟ್ಟಿಕೊಳ್ಳಿ ಸೆರಗಿನಲ್ಲಿ** ‖ ಅ ‖

**ಥಳಥಳಿಸುವ ಮುತ್ತು ಕಮಲನೇತ್ರದ ಮುತ್ತು**
**ಕಲುಷ ಪರ್ವತಕ್ಕಿದು ಕುಲಿಶವಾಗಿಪ್ಪ ಮುತ್ತು**
**ಹಲಧರಾನುಜನೆಂಬ ಪವಿತ್ರನಾಮದ ಮುತ್ತು**
**ಒಲಿದು ಭಜಿಪರ ಭವತರಿದು ಕಾಯುವ ಮುತ್ತು** ‖ ೧ ‖

**ಅಂಜದಿದ್ದವರಿಗೆ ಅಂಜಿಕೆ ತೋರುವ ಮುತ್ತು**
**ಭಂಜಿಸಿದ ಇತರ ಭಯವ ತೋರುವ ಮುತ್ತು**
**ಸಂಜೀವರಾಯರ ಹೃದಯದೊಳಗಿನ ಮುತ್ತು**
**ಕಂಜಭವಾದಿಗಳ ಶಿರಸಾವಹಿಸುವ ಮುತ್ತು** ‖ ೨ ‖

**ಜ್ಞಾನವೆಂಬೊದಾರದಲ್ಲಿ ಪೋಣಿಸುವ ಮುತ್ತು**
**ಜ್ಞಾನಿಗಳ ಮನದಲ್ಲಿ ಮೆರೆವ ಮುತ್ತು**
**ಆನಂದತೀರ್ಥರ ಮನದೊಳೊಪ್ಪುವ ಮುತ್ತು**
**ಶ್ರೀನಿಧಿ ಆದಿಕೇಶವನೆಂಬೊ ಆಣಿಮುತ್ತು** ‖ ೩ ‖

ಅರ್ಥ : ಕಲುಷಪರ್ವತ=ಪಾಪದ ಬೆಟ್ಟ. ಕುಲಿಶ=ವಜ್ರದ ಆಯುಧ. ತರಿ=(ನಾಶಮಾಡು) ಕತ್ತರಿಸು. ಹಲಧರ=ಬಲರಾಮ (ನೇಗಿಲು ಹೊತ್ತವ). ಕಂಜಭವ=ಬ್ರಹ್ಮ (ಕಮಲದಲ್ಲಿ ಹುಟ್ಟಿದವ). ಆನಂದತೀರ್ಥ=ಮಧ್ವಾಚಾರ್ಯರು. ಆಣಿಮುತ್ತು= ಜಾತಿ ಮುತ್ತು (ನಿಜವಾದ ಮುತ್ತು).

ಭಾವ : ದೇವರ ನಾಮ ಎನ್ನುವುದು ಒಂದು ಜಾತಿ ಮುತ್ತು. ಅಂತರಂಗದಲ್ಲಿ ಈ ಮುತ್ತು ಬೆಳಗಬೇಕು; ಹೊಳೆಯಬೇಕು. ಇದು ಪಾಪ ನಾಶ ಮಾಡುತ್ತದೆ; ಭಯ ನಿವಾರಿಸುತ್ತದೆ. ಜ್ಞಾನದ ದಾರದಲ್ಲಿ ಇದನ್ನು ಪೋಣಿಸಬೇಕು; ಮನದಲ್ಲಿ ಮೆರೆಯಬೇಕು. ಇಂಥ ಜಾತಿ ಮುತ್ತು ಎಲ್ಲರೂ ಅಂತರಂಗದಲ್ಲಿ ಜೋಪಾನದಿಂದ ಕಾಪಾಡಿಕೊಳ್ಳಬೇಕು.

# ಯಮದೂತರಿನ್ನೇನು ಮಾಡುವರು

ರಾಗ : ಪಂತುವರಾಳಿ, ಅಟತಾಳ

ಯಮದೂತರಿನ್ನೇನು ಮಾಡುವರು ಪೇಳೊ
ರಮೆಯರಸನೆ ನಿನ್ನ ಅರಕೆಯುಳ್ಳವರಿಗೆ || ಪ ||

ಮಂಡಲದೊಳಗೊಬ್ಬ ಜಾರ ಸ್ತ್ರೀಯಳು ತನ್ನ
ಗಂಡನರಿಕೆಯಿಂದ ವ್ಯಭಿಚಾರಗೈಯೆ
ಮಂಡಲಪತಿಯು ಶೋಧಿಸಿ ಹಿಡಿದೆಳೆತಂದು
ಬಂಡು ಮಾಡಲು ಬೆದರುವಳೆ ಕೇಳೆಲೊ ಹರಿ || ೧ ||

ಕಳವಿನ ಒಡವೆಯ ಒಡೆಯಗೆ ಪಾಲೀವ
ಕಳ್ಳಬಂಟ ಕನ್ನ ಕೊರೆಯುತ್ತಿರೆ
ಕಳವು ಮಾಡಿದನೆಂದು ಹಿಡಿದೆಳೆತಂದರೆ
ತಳವಾರನೇನು ಮಾಡುವನು ಕೇಳೆಲೊ ಹರಿ || ೨ ||

ಮನವಚನದಲಿ ಮಾಡಿದ ಪುಣ್ಯ ಪಾಪಗಳ
ನಿನಗರ್ಪಿಸುವೆ ಕಾಲ ಕಾಲದಲ್ಲಿ
ಘನ ಕೃಪಾಂಬುಧಿ ಕಾಗಿನೆಲೆಯಾದಿಕೇಶವ
ಎನಗೊಬ್ಬರೇನು ಮಾಡುವರು ಕೇಳೊಲೊ ಹರಿ || ೩ ||

ಅರ್ಥ : ಅರಕೆ=ಹರಕೆ. ಬಂಡುಮಾಡು=(ಅಂಜಿಸು) ಅವಮಾನಿಸು.

ಭಾವ : ದೇವರ ರಕ್ಷೆಯಿದ್ದವರಿಗೆ (ದೇವರಿಗೆ ಪ್ರಿಯವಾದವರಿಗೆ) ಸಾವಿನ ಭಯವಿಲ್ಲ. ಗಂಡನಿಗೆ ಗೊತ್ತಿದ್ದೇ ವ್ಯಭಿಚಾರ ಮಾಡುವ ಹೆಂಡತಿಯನ್ನು ಹುಡುಕಿ ಎಳೆತಂದು ಬೆದರಿಸಿದರೆ ಅವಳು ಅಂಜುವಳೆ? ಕಳ್ಳತನ ಮಾಡಿತಂದ ಒಡವೆಯಲ್ಲಿ ಅಧಿಕಾರಿಗೂ ಪಾಲು ಕೊಡುವಂಥ ಕಳ್ಳನನ್ನು ತಳವಾರ ಹಿಡಿದೆಳೆತಂದರೆ ಅವನಿಗೆ ಶಿಕ್ಷೆ ಹೇಗಾದೀತು? ಪುಣ್ಯ ಪಾಪ ಕಾರ್ಯಗಳನ್ನು ವಂಚನೆಯಿಲ್ಲದೆ ದೇವರಿಗೆ ಸಮರ್ಪಿಸಿದರೆ ಅಂಥ ಭಕ್ತನನ್ನು ಯಾರೂ ಏನೂ ಮಾಡಲಾರರು.

# ಯಾಕೆ ನೀನಿಲ್ಲಿ ಪವಡಿಸಿದೆ

ರಾಗ: ಭೂಪಾಳಿ, ಝಂಪೆತಾ

ಯಾಕೆ ನೀನಿಲ್ಲಿ ಪವಡಿಸಿದೆ ಹರಿಯೆ | ಜಗ || ಪ
ದೇಕ ವಿಖ್ಯಾತ ಪಶ್ಚಿಮ ರಂಗನಾಥ || ಅ

ತಮಸೊಡನೆ ಹೋರಿ ಬೆಟ್ಟವನು ಬೆನ್ನಲಿ ಹೊತ್ತು
ರಮಣಿ ಭೂಮಿಯನು ತಂದಾಯಾಸವೊ
ಅಮರ ವೈರಿಯ ಕರುಳಕಿತ್ತ ಕಡು ಧಾವತಿಯೊ
ಕ್ಷಮೆಯನಳೆದೀ ಪಾದಕಮಲ ನೊಂದುವೋ || ೧

ಪೊಡವಿಪಾಲಕರ ವಂಶವನು ಒಬ್ಬನೆ ಕಡಿದು
ಕೊಡಲಿಯನು ಬಿಸುಟು ಮಲಗಿದ ಭಾವವೊ
ಮಡದಿಯನು ಕದ್ದೊಯ್ದವನ ಶಿರವನೆ ತಂದು
ಒಡಲಿನಾಯಾಸದಲಿ ಪವಡಿಸಿದ ಪರಿಯೊ || ೨ |

ವಾಲಿ ಮೊದಲಾದ ಎದುರಾಂತ ವೀರರ ಕೊಂದು
ಕಾಳಿಯ ಹೆಡೆ ತುಳಿದು ನೈಯಲಸಿತೊ
ಲೀಲೆಗೋಸುಗ ಬಂದು ನಿರ್ವಾಣದಲಿ ನಿಂದು
ಲಜ್ಜೆಗಾಗಿ ತಲೆ ಬಾಗಿ ಮಲಗಿದ್ಯೊ ದೇವ || ೩ |

ನಾಲ್ಕು ಯುಗದಾಧಾರಿ ಕಡೆಗೆ ತುರಗವನೇರಿ
ಸಾಕಾಗಿ ದಣಿದು ನೀನಿಲ್ಲಿ ಮಲಗಿದೆಯೊ
ಸಾಕಾರಿಯಾಗಿ ಗೌತಮ ಮುನೀಶ್ವರನಿಗೆ
ಬೇಕೆಂದು ನೀ ಕೊಟ್ಟ ವರಕೆ ಮಲಗಿದೆಯೊ || ೪ ||

ಇನ್ನೆಷ್ಟುಕಾಲ ನೀನಿಲ್ಲಿ ಮಲಗಿದ್ದರೂ
ನಿನ್ನನೆಬ್ಬಿಸುವರೊಬ್ಬರನು ಕಾಣೆ
ಉನ್ನಂತ ಕಾಗಿನೆಲೆಯಾದಿಕೇಶವರಾಯ
ಚೆನ್ನ ಶ್ರೀರಂಗಪಟ್ಟಣದ ರಂಗಧಾಮ || ೫ ||

ಅರ್ಥ : ತಮ=ರಾಕ್ಷಸನ ಹೆಸರು. ಧಾವತಿ=ಶ್ರಮ. ಕ್ಷಮೆ=ಭೂಮಿ.

ಭಾವ : ಮಲಗಿದ ಭಂಗಿಯಲ್ಲಿರುವ ದೈವವನ್ನು ಕಂಡು ಆತನೊಡನೆ ಭಕ್ತ ಮಾತಾಡುತ್ತಾನೆ. ದೇವನ ಕೂರ್ಮ, ವರಾಹ ಇತ್ಯಾದಿ ವಿವಿಧ ಅವತಾರಗಳು—ಭಕ್ತರ ಉದ್ಧಾರಕ್ಕಾಗಿ ದೇವನು ಮಾಡಿದ ಅದ್ಭುತ ಕಾರ್ಯಗಳು. ಅದರಿಂದ ಉಂಟಾದ ಶ್ರಮ. ವಿಶ್ರಾಂತಿಯಲ್ಲಿರುವ ದೇವರನ್ನು ಎಬ್ಬಿಸುವವರಾರು ? ಅಂಥ ನಿಜವಾದ ಭಕ್ತರು ಒಬ್ಬರೂ ಕಾಣುತ್ತಿಲ್ಲ ಎನ್ನುವ ಕೊರಗು ಈ ಕೀರ್ತನೆಯ ಆಶಯ ಮತ್ತು ಧ್ವನಿ. ಇದು ಪ್ರವಾದಿಯೊಬ್ಬನು ಆಡಿದ ನಿತ್ಯಸತ್ಯ.

# ವರಕವಿಗಳ ಮುಂದೆ

ರಾಗ: ಸೌರಾಷ್ಟ್ರ, ಅಟತಾಳ

ವರಕವಿಗಳ ಮುಂದೆ ನರಕವಿಗಳ ವಿದ್ಯೆ ತೋರಬಾರದು | ಈ
ಧರಣಿಯ ಕಲ್ಲಿಗೆ ಶರಣೆಂದು ಪೂಜೆಯ ಮಾಡಬಾರದು || ಪ ||

ಪಾಪಿಗಳಿದ್ದಲ್ಲಿ ರೂಪುಳ್ಳ ವಸ್ತುವ ತೋರಬಾರದು | ಬಹು
ಕೋಪಿಗಳಿದ್ದಲ್ಲಿ ಅನುಭಾವಗೋಷ್ಠಿಯ ಮಾಡಬಾರದು || ೧ ||

ಅಡಿಸತ್ತ ಮಡಕೆಗೆ ಜೋಡಿಸಿ ಒಲೆಗುಂಡ ಹೂಡಬಾರದು | ಬಹು
ಬಡತನ ಬಂದಾಗ ನೆಂಟರ ಬಾಗಿಲ ಸೇರಬಾರದು || ೨ ||

ಹರಿಯನಿಂದಿಸಿ ಹರ ಘನನೆಂದು ನರಕಕ್ಕೆ ಬೀಳಬಾರದು | ತಾ
ಪರರನು ಬೈದು ಪಾತಕಕೆ ಮುನ್ನೊಳಗಾಗಬಾರದು || ೩ ||

ಮಡದಿ ನುಡಿಯ ಕೇಳಿ ಜಗಳಕೊಬ್ಬರಕೂಡೆ ಹೋಗಬಾರದು | ಬಾ
ಯ್ಬಡಕರು ಇದ್ದಲ್ಲಿ ವಸ್ತಿ ಬಿಡಾರವ ಮಾಡಬಾರದು | || ೪ ||

ಮುಂದೆ ಭಲೆ ಎಂದು ನಿಂದಿಪರನ್ನು ಕೂಡಬಾರದು | ನಮ್ಮ
ತಂದೆ ಬಾಡದಾದಿಕೇಶವನ ಸ್ಮರಣೆಯ ಬಿಡಬಾರದು || ೫ ||

ಅರ್ಥ : ವರಕವಿ=ಶ್ರೇಷ್ಠ ಕವಿ, ಹುಟ್ಟುಕವಿ. ನರಕವಿ=(ಅಹಂಕಾರ ತುಂಬಿದ) ಜೊಳ್ಳು ಕವಿ. ಅಡಿಸತ್ತ=(ಸತ್ವಹೀನ) ದುರ್ಬಲ ತಳವುಳ್ಳ ಮಡಕೆ.

ಭಾವ : ಮಾನವ ವಿಚಾರಶೀಲನಾಗಬೇಕು. ಮೂಢನಾಗಬಾರದು. ಹರಿಹರರ ಭೇದ ಮಾಡಕೂಡದು. ಕಲ್ಲು ಮಾತ್ರ ದೇವರೆಂದು ಪೂಜಿಸಕೂಡದು. ಪಾಪಿಗಳಿಗೆ ರೂಪುಳ್ಳ ವಸ್ತು ತೋರಬಾರದು. ಕೋಪಿಗಳಿಗೆ ಅನುಭಾವದ ಮಾತು ಹೇಳಕೂಡದು. ಎದುರು ಹೊಗಳಿ ಹಿಂದೆ ತೆಗಳುವವರ ಗೆಳೆತನ ಮಾಡಬಾರದು ಇತ್ಯಾದಿ ಲೌಕಿಕ ನೀತಿಯನ್ನು ಹೇಳಲಾಗಿದೆ.

# ಸಂಸಾರ ಸಾಗರವನುತ್ತರಿಸುವೊಡೆ

ರಾಗ: ಮುಖಾರಿ, ಅಟತಾಳ

ಸಂಸಾರ ಸಾಗರವನುತ್ತರಿಸುವೊಡೆ
ಕಂಸಾರಿ ನಾಮವೊಂದೆ ಸಾಕು ಮನವೆ ‖ ಪ ‖

ಯತಿಯಾಗಬೇಡ ನೀ ವೈರಾಗ್ಯವನೆ ಪಿಡಿದು
ಸತತ ವ್ರತವ ಮಾಡಿದೆನೆಂಬ ಹಮ್ಮು ಬೇಡ
ಶ್ರುತಿ ಸ್ಮೃತಿಗಳನರಿತು ನಡೆವೆನೆನಬೇಡ
ರತಿಪತಿಯ ಶ್ರೀನಾಮವೊಂದೆ ಸಾಕು ‖ ೧ ‖

ತನುವ ದಂಡಿಸಿ ತುದಿಯ ಕೋಡುಗಲ್ಲಿನ ಮೇಲೆ
ವನಿತೆಯನು ಬಿಟ್ಟು ತಪವಿರಲು ಬೇಡ
ಅನುವರಿತು ನೀರೊಳಗೆ ಬಿಡದೆ ಮುಳುಗಲು ಬೇಡ
ವನಜಾಕ್ಷನಾಮವೊಂದೇ ಸಾಕು ಮರುಳೆ ‖ ೨ ‖

ತೀರ್ಥಯಾತ್ರೆಗೆ ನೀನು ತಿರುಗಿ ಝೊಂಪಿಸಿ ಕೃ
ತಾರ್ಥನಾದೆನೆಂಬ ಹೆಮ್ಮೆ ಬೇಡ
ಧೂರ್ತಭಂಜನ ಕಾಗಿನೆಲೆಯಾದಿಕೇಶವನ
ಕೀರ್ತನೆಯ ಮಾಡಿ ಸುಖಿಯಾಗೊ ಮನವೆ ‖ ೩ ‖

ಅರ್ಥ: ಉತ್ತರಿಸು=ದಾಟಿಸು. ಕಂಸಾರಿ=ಕೃಷ್ಣ (ಕಂಸನನ್ನು ಕೊಂದವ; ಕಂಸನ ವೈರಿ). ಹಮ್ಮು=ಸೊಕ್ಕು. ಝೊಂಪಿಸು=ಬಳಲು. ಕೃತಾರ್ಥ=ಧನ್ಯ. ಧೂರ್ತಭಂಜನ=ದುಷ್ಟರನ್ನು ನಾಶಮಾಡುವವ.

ಭಾವ: ಸಂಸಾರದ ಸಾಗರವನ್ನು ದಾಟಬೇಕಾದರೆ ದೇವರ ಸ್ಮರಣೆಯು ಬಲಬೇಕು. ಡಾಂಭಿಕ ಆಚರಣೆಗಳಿಂದ ಭಗವಂತ ಒಲಿಯುವುದಿಲ್ಲ. ದೇವರ ನಿರಂತರ ಧ್ಯಾನ ಸಂಕೀರ್ತನೆಗಳ ಮೂಲಕ ಮನುಷ್ಯ ತನ್ನ ಜೀವನ ಸಾರ್ಥಕ ಮಾಡಿಕೊಳ್ಳಬೇಕು.

# ಹ್ಯಾಂಗೆ ನೀ ದಾಸನಾದಿ

ರಾಗ: ಶಂಕರಾಭರಣ, ಅಟತಾ

ಹ್ಯಾಂಗೆ ನೀ ದಾಸನಾದಿ ಪ್ರಾಣಿ || ಪ

ಹ್ಯಾಂಗೆ ದಾಸನಾದಿ ಹೀಂಗೆ ಸಂಸಾರದೊಳು
ಮಂಗನಂದದಿ ಭಂಗಪಡುವವ || ಅ

ಆಸೆಯ ಬಿಡಲಿಲ್ಲ ಕಾಸುಗಳಿಸುವೆಯಲ್ಲ
ದೋಷಕ್ಕೆ ಗುರಿಯಾಗಿ ಹೇಸಿಕೆಯೊಳು ಬಿದ್ದು || ೧ |

ತನುವು ನನ್ನದು ಎಂದು ತನಯ ಮಾನಿನಿಯರೆ
ಇನಿತು ಎನಗೆ ಗತಿಯೆಂಬುವ ಮೂಢನೆ || ೨ |

ಕಾಲನದೂತರು ಕರುಣ ಸಂಪನ್ನರೆ
ಕಾಲ ವ್ಯರ್ಥವ ಕಳೆವ ಕೀಳು ಬುದ್ಧಿಯ ಪ್ರಾಣಿ || ೩ |

ತಲೆ ಹುಳಿತ ನಾಯಂತೆ ಹಲವು ಬೀದಿಯ ತಿರುಗಿ
ಗೆಲುವಿನಿಂದಲಿ ಮೂಲ ಮಲವನಳಿಯದೆ || ೪ |

ಉದರ ಪೋಷಣೆಗಾಗಿ ಅಧಮರನು ಯಾಚಿಸುತ
ಮದಗರ್ವವೆಂಬುದ ಬದಿಯಲಿಟ್ಟುಕೊಂಡು || ೫ |

ಹಿರಿಯರ ನಿಂದಿಸಿ ಹರಿದಾಸನೆನಿಸಿದೆ
ಗುರುಮಂತ್ರವರಿಯದ ಮರುಳ ಪಾಮರ ಪ್ರಾಣಿ || ೬ |

ಕಾಲು ಗೆಜ್ಜೆಯ ಕಟ್ಟಿ ಮೇಲೆ ಕರತಾಳ ಪಿಡಿದು
ಶ್ರೀ ಲೋಲನ ಗುಣ ಪೊಗಳಿ ನಟಿಸದಲೆ || ೭ ||

ಕುಣಿದು ಹರಿಯ ಮುಂದೆ ಮಣಿದು ಸಜ್ಜನ ಪದಕೆ
ಅಣಿಮಾದ್ಯಷ್ಟಸಿದ್ಧಿ ಕೈಗೊಳ್ಳದವನಾಗಿ || ೮ ||

ವೇದಶಾಸ್ತ್ರಗಳನು ವೋದದಿಂದೋದದೆ
ಬಾದರಾಯಣ ಕೃತ ಭಾಗವತ ಕೇಳದೆ || ೯ ||

ಕಟ್ಟಿ ಕೈ ಪರರಲ್ಲಿ ಹೊಟ್ಟೆಗೋಸುಗ ಕಂ
ಗೆಟ್ಟು ಯಾಚಿಸುವ ಭ್ರಷ್ಟ ಪ್ರಾಣಿಯೆ ನೀ || ೧೦ ||

ನೇಮದಿ ಉಪವಾಸ ಆ ಮಹಾ ಏಕಾದಶಿ
ಕಾಮಜನಕನನ್ನು ಪ್ರೇಮದಿ ಸ್ಮರಿಸದೆ || ೧೧ ||

ಏಸುದಿನ ಬದುಕಿದರು ಸೂಸುವ ಮರಣವು
ಈಸಿ ದಾಟದೆ ವೀಸಕಾಸಿಗೆ ಬಾಳಿದೆ || ೧೨ ||

ಅಂಗದೊಳಡಗಿಪ್ಪ ಮಂಗಳಮೂರುತಿ ಪಾ
ದಂಗಳ ಮನದಲಿ ಹಿಂಗದೆ ಭಜಿಸದೆ || ೧೩ ||

ಬತ್ತಿಹೋಯಿತು ನದಿ ಬಿತ್ತದೆ ಬೆಳೆಯದೆ
ಅತ್ತರೆ ಬಹುದೇನೊ ಉತ್ತಮ ಫಲಸೂಸಿ || ೧೪ ||

ಆಡುವ ಮಕ್ಕಳ ಕೈ ನೀಡಿದ ಕದಳಿಯು
ಬೇಡಿದರೆ ಕೊಟ್ಟು ಕೂಡ್ಯಾಡೊ ತೆರದಿ || ೧೫ ||

ಶೃಂಗಾರ ಬಯಸುತ ಬಂಗಾರದೊಡವೆಯು
ಹಿಂಗಾದೆ ಶ್ರೀ ತುಳಸಿ ರಂಗಗರ್ಪಿಸದೆ || ೧೬ ||

ಸುತ್ತ ಕತ್ತಲೆ ಚಿಂತೆ ಮತ್ತೆ ಭಯದ ಭ್ರಾಂತಿ
ಚಿತ್ತಜನಯ್ಯನು ದೊರೆವ ಬಗೆ ಕಾಣದೆ || ೧೭ ||

ಡಂಬವ ಮಾಡಿಕೊಂಡು ತುಂಬ ಪಾಪವು ಒಳಗೆ
ಹಂಬಲಿಸಿದರಿನ್ನು ಬೆಂಬಲಕಾಗೊರಾರು || ೧೮ ||

ದುಂಡುನಾಮವ ಬಳಿದು ಭಂಡತನದಿ ಜಗದಿ
ದಂಡಿಗೆ ಬೆತ್ತ ಪಿಡಿದು ಹೆಂಡರ ಕಾಯ್ವನೆ || ೧೯ ||

ಪಕ್ಷಿವಾಹನನ ಗುಣ ಲೆಕ್ಕಿಸಿ ಪೊಗಳದೆ
ಬಿಕ್ಕಸ ಬೆರಗಾಗಿ ಅಕ್ಕಿಗೆ ತಿರುಗುವವ || ೨೦ ||

ಭೋಗಿಶಯನನುರಾಗದಿ ಭಜಿಸದೆ
ಕಾಗಿನೆಲೆಯಾದಿಕೇಶವರಾಯನೆನದೆ || ೨೧ ||

ಅರ್ಥ : ಅಣಿಮಾದಿಸಿದ್ಧಿ=ಲಘುಮ, ಗರಿಮ ಇತ್ಯಾದಿ ಸಿದ್ಧಿಗಳು. ಕಾಮಜನಕ=ವಿಷ್ಣು.

ಭಾವ : ಹರಿದಾಸರಾಗಬೇಕಾದರೆ ಉತ್ತಮ ಗುಣಿಗಳಾಗಬೇಕು. ಆಸೆ ರೋಷಗಳನ್ನು ಬಿಡಬೇಕು. ಕಾಮವಶನಾಗಿ ಮಂಗಚೇಷ್ಟೆ ಮಾಡುವುದು ಅಹಂಕಾರದಿಂದ ಅಲೆಯುವುದು ದಾಸನ ಲಕ್ಷಣ ಅಲ್ಲ. ಉತ್ತಮ ಗುಣ ಗಳಿಸಿ ದೈವಭಕ್ತನಾಗಿ ಬದುಕಿದರೆ ಅವನು ನಿಜವಾದ ಹರಿದಾಸ. ಅಷ್ಟಸಿದ್ಧಿಗಳು : ಅಣಿಮ, ಮಹಿಮ, ಲಘುಮ, ಗರಿಮ, ಪ್ರಾಪ್ತಿ, ಪ್ರಕಾಮ್ಯ, ಈಶಿತ್ವ, ವಶಿತ್ವ ಎಂಬ ಸಿದ್ಧಿಗಳು.

## ಹರಿಭಕ್ತಿಸಾರ

ಶ್ರೀಯರಸ ಗಾಂಗೇಯನುತ ಕೌಂ
ತೇಯವಂದಿತ ಚರಣ ಕಮಲದ
ಳಾಯತಾಂಬಕರೂಪ ಚಿನ್ಮಯ ದೇವಕೀತನಯ
ರಾಯ ರಘುಕುಲವರ್ಯ ಭೂಸುರ
ಪ್ರೀಯ ಸುರಪುರನಿಲಯ ಚೆನ್ನಿಗ
ರಾಯ ಚತುರೋಪಾಯ ರಕ್ಷಿಸು ನಮ್ಮನನವರತ ||೧||

ದೇವ ದೇವ ಜಗದ್ಭರಿತ ವಸು
ದೇವಸುತ ಜಗದೇಕನಾಥ ರ
ಮಾವಿನೋದಿತ, ಸಜ್ಜನಾನತ ನಿಖಿಲಗುಣಭರಿತ
ಭಾವಜಾರಿಪ್ರಿಯ ನಿರಾಮಯ
ರಾವಣಾಂತಕ, ರಘುಕುಲಾನ್ವಯ
ದೇವ ಅಸುರ ವಿರೋಧಿ ರಕ್ಷಿಸು ನಮ್ಮನನವರತ ||೨||

'ಹರಿಭಕ್ತಿಸಾರ'ದ ಮೊದಲ ಹದಿನೇಳು ಪದ್ಯಗಳಲ್ಲಿ ಕನಕದಾಸರು ಶ್ರೀಹರಿಯನ್ನು ಹಲವು ರೀತಿಗಳಲ್ಲಿ ಸ್ತೋತ್ರ ಮಾಡುತ್ತಾರೆ. ಕಾವ್ಯವು 'ಶ್ರೀ' ಶಬ್ದದಿಂದ ಪ್ರಾರಂಭವಾಗಿ, ಮೊದಲ ಹದಿನೇಳು ಪದ್ಯಗಳಲ್ಲಿ ಶ್ರೀಹರಿಯ ಸಂಪತ್ತು, ಶಕ್ತಿ, ಚೆಲುವು, ಶಿಷ್ಟರಕ್ಷಕ ದುಷ್ಟ ಶಿಕ್ಷಕ ಕಾರ್ಯ ಇವುಗಳನ್ನು ಸ್ಮರಿಸುವುದಲ್ಲದೆ ಅವನ ಕರುಣೆಯನ್ನು ಕೊಂಡಾಡುತ್ತದೆ.

೧ ಗಾಂಗೇಯನುತ=ಭೀಷ್ಮನಿಂದ ಸ್ತುತಿಸಲ್ಪಟ್ಟವನು. ಕೌಂತೇಯ=ಪಾಂಡವರು. ಕಮಲದಳಾಯತಾಂಬಕರೂಪ=ಕಮಲದ ದಳದಂತೆ ವಿಶಾಲವಾದ ಕಣ್ಣುಳ್ಳವನು. ಚಿನ್ಮಯ=ಜ್ಞಾನದ ಮೂರ್ತಿ. ಚತುರೋಪಾಯ=ಸಾಮ, ದಾನ, ಭೇದ, ದಂಡಗಳೆಂಬ ನಾಲ್ಕು ಉಪಾಯಗಳನ್ನು ಬಳಸುವವನು.

೨ ಜಗದ್ಭರಿತ=ಜಗತ್ತನ್ನೆಲ್ಲ ವ್ಯಾಪಿಸಿರುವವನು. ಸಜ್ಜನಾನತ=ಸಜ್ಜನರಿಂದ ನಮಸ್ಕರಿಸಲ್ಪಡುವವನು. ನಿಖಿಲ=ಸರ್ವ. ಭಾವಜಾರಿಪ್ರಿಯ=ಈಶ್ವರನಿಗೆ ಪ್ರಿಯನಾದವನು. ನಿರಾಮಯ=ದುಃಖವಿಲ್ಲದವನು. ರಘುಕುಲಾನ್ವಯ ದೇವ=ರಘುವಂಶದ ಕುಲದೇವತೆ (ಶ್ರೀರಾಮನು ರಘುವಂಶಕ್ಕೆ ಸೇರಿದವನು).

ಅನುಪಮಿತ ಚಾರಿತ್ರ ಕರುಣಾ
ವನಧಿ ಭಕ್ತಕುಟುಂಬಿ ಯೋಗೀ
ಜನಹೃದಯುಪರಿಪೂರ್ಣ ನಿತ್ಯಾನಂದ ನಿಗಮನುತ
ವನಜನಾಭ ಮುಕುಂದ ಮುರಮ
ರ್ದನ ಜನಾರ್ದನ ತ್ರೈಜಗತ್ಪಾ
ವನ ಸುರಾರ್ಚಿತ ದೇವ ರಕ್ಷಿಸು ನಮ್ಮನನವರತ ‖ ೩

ಕಮಲಸಂಭವವಿನುತ ವಾಸವ
ನಮಿತ ಮಂಗಳ ಚರಿತ ದುರಿತ
ಕ್ಷಮಿತ ರಾಘವ ವಿಶ್ವಪೂಜಿತ ವಿಶ್ವ ವಿಶ್ವಮಯ
ಅಮಿತವಿಕ್ರಮ ಭೀಮ ಸೀತಾ
ರಮಣ ವಾಸುಕಿಶಯನ ಖಗಪತಿ
ಗಮನ ಕಂಜಜನಯ್ಯ ರಕ್ಷಿಸು ನಮ್ಮನನವರತ ‖ ೪ ‖

ಕ್ಷೀರವಾರಿಧಿಶಯನ ಶಾಂತಾ
ಕಾರ ವಿವಿಧವಿಚಾರ ಗೋಪೀ
ಜಾರ ನವನಿತ ಚೋರ ಚಕ್ರಾಧಾರ ಭವದೂರ
ಮಾರಪಿತ ಗುಣಹಾರ ಸರಸಾ
ಕಾರ ರಿಪುಸಂಹಾರ ತುಂಬುರು
ನಾರದಪ್ರಿಯ ವರದ ರಕ್ಷಿಸು ನಮ್ಮನನವರತ ‖ ೫ ‖

೩ ಅನುಪಮಿತ=ಸಮನಿಲ್ಲದ. ವನಧಿ=ಸಮುದ್ರ. ನಿಗಮನುತ=ವೇದಗಳಿಂದ ಹೊಗಳಲ್ಪಟ್ಟ ವನು. ಮುರಮರ್ದನ=ಮುರ ಎಂಬ ರಾಕ್ಷಸನನ್ನು ಕೊಂದವನು.

೪ ಕಮಲಸಂಭವವಿನುತ=ಬ್ರಹ್ಮನಿಂದ ಸ್ತುತಿಸಲ್ಪಟ್ಟವನು. ವಾಸವನಮಿತ=ಇಂದ್ರನಿಂದ ನಮಸ್ಕರಿಸಲ್ಪಟ್ಟವನು. ದುರಿತಕ್ಷಮಿತ=ಪಾಪಗಳನ್ನು ಕ್ಷಮಿಸುವವನು. ಭೀಮ=(ದುಷ್ಟರನ್ನು ಶಿಕ್ಷಿಸುವ) ಅಸಾಧಾರಣ ಶಕ್ತಿವಂತ. ವಾಸುಕಿಶಯನ=ಆದಿಶೇಷನ ಮೇಲೆ ಮಲಗಿರುವವನು. ಖಗಪತಿ=ಗರುಡ. ಕಂಜಜನಯ್ಯ=ಬ್ರಹ್ಮನ ತಂದೆ (ವಿಷ್ಣು).

೫ ಕ್ಷೀರವಾರಿಧಿ ಶಯನ=ಹಾಲಿನ ಸಮುದ್ರದಲ್ಲಿ ಮಲಗಿರುವವನು. ವಿವಿಧ ವಿಚಾರ=ಎಲ್ಲ ವಸ್ತುಗಳಲ್ಲಿಯೂ ಸಂಚರಿಸುವವನು. ಗೋಪೀಜಾರ=ಗೋಪಿಯರ ಪ್ರೀತಿಪಾತ್ರ. ನವನಿತ ಚೋರ=ಬೆಣ್ಣೆಯನ್ನು ಕದ್ದವನು. ಚಕ್ರಾಧಾರ=ಜಗತ್ತಿಗೆ ಆಧಾರನಾದವನು. ಭವದೂರ=ಹುಟ್ಟು ಸಾವಿಲ್ಲದವನು, ಸಂಸಾರದ ಕಷ್ಟವನ್ನು ದೂರಮಾಡುವವನು. ಮಾರಪಿತ=ಮನ್ಮಥನ ತಂದೆ. ಗುಣಹಾರ=ಗುಣಗಳನ್ನು ಭೂಷಣ ಮಾಡಿಕೊಂಡಿರುವವನು. ರಿಪುಸಂಹಾರ=ಶತ್ರುಗಳನ್ನು ಕೊಲ್ಲುವವನು. ವರದ=ವರಗಳನ್ನು ಕೊಡುವವನು.

ತಾಮರಸದಳನಯನ ಭಾರ್ಗವ
ರಾಮ ಹಲಧರರಾಮ ದಶರಥ
ರಾಮ ಮೇಘಶ್ಯಾಮ ಸದ್ಗುಣಧಾಮ ನಿಸ್ಸೀಮ
ಸಾಮಗಾನ ಪ್ರೇಮ ಕಾಂಚನ
ಧಾಮಧರ ಸುತ್ರಾಮವಿನಮಿತ
ನಾಮ ರವಿಕುಲಸೋಮ ರಕ್ಷಿಸು ನಮ್ಮನನವರತ || ೬ ||

ವೇದಗೋಚರ ವೇಣುನಾದವಿ
ನೋದ ಮಂದರಶೈಲಧರ ಮಧು
ಸೂದನಾಚ್ಯುತ ಕಂಸದಾನವರಿಪು ಮಹಾಮಹಿಮ
ಯಾದವೇಂದ್ರ ಯಶೋದೆನಂದನ
ನಾದಬಿಂದುಕಳಾತಿಶಯ ಪ್ರ
ಹ್ಲಾದರಕ್ಷಕ ವರದ ರಕ್ಷಿಸು ನಮ್ಮನನವರತ || ೭ ||

ಅಕ್ಷಯಾಶ್ರಿತ ಸುಜನಜನಸಂ
ರಕ್ಷಣ ಶ್ರೀವತ್ಸಕೌಸ್ತುಭ
ಮೋಕ್ಷದಾಯಕ ಕುಟಿಲದಾನವ ಶಿಕ್ಷಕುಮುದಾಕ್ಷ
ಪಕ್ಷಿವಾಹನ ದೇವಸಂಕುಲ
ಪಕ್ಷ ನಿಗಮಾಧ್ಯಕ್ಷ ವರನಿಟಿ
ಲಾಕ್ಷಸಖ ಸರ್ವೇಶ ರಕ್ಷಿಸು ನಮ್ಮನನವರತ || ೮ ||

೬ ತಾಮರಸದಳನಯನ=ತಾವರೆಯ ಕಣ್ಣಿನವನು. ಭಾರ್ಗವ ರಾಮ=ಪರಶುರಾಮ. ಹಲಧರರಾಮ=ಬಲರಾಮ. ನಿಸ್ಸೀಮ=ಅನಂತ. ಕಾಂಚನಧಾಮಧರ=ಬಂಗಾರದ ಹಾರವನ್ನು ಧರಿಸಿದವನು. ಸುತ್ರಾಮವಿನಮಿತನಾಮ=ದೇವೇಂದ್ರನೇ ಸ್ತುತಿಸುವ ಹೆಸರಿವನವನು.

೭ ವೇದಗೋಚರ=ವೇದಗಳಿಗೆ ಕಾಣಿಸುವವನು. ಮಂದರಶೈಲಧರ=ಮಂದರಗಿರಿಯನ್ನು ಎತ್ತಿ ಹಿಡಿದವನು. ನಾದಬಿಂದುಕಳಾತಿಶಯ=ಆಗಮಶಾಸ್ತ್ರದಲ್ಲಿ ಪ್ರಸಿದ್ಧವಾದ ತತ್ತ್ವಗಳಾದ ನಾದ, ಬಿಂದು, ಕಲಾ ಇವುಗಳನ್ನು ಮೀರಿದವನು.

೮ ಅಕ್ಷಯ=ನಾಶವಿಲ್ಲದವನು. ಆಶ್ರಿತಸುಜನಸಂರಕ್ಷಣ=ತನ್ನನ್ನು ನಂಬಿದ ಒಳ್ಳೆಯ ಜನರನ್ನು ಕಾಪಾಡುವವನು. ಶ್ರೀವತ್ಸಕೌಸ್ತುಭ=ಶ್ರೀವತ್ಸ ಮತ್ತು ಕೌಸ್ತುಭಗಳನ್ನು ಧರಿಸಿದವನು. ಕುಟಿಲದಾನವ ಶಿಕ್ಷ=ಕಪಟಿಗಳಾದ ರಾಕ್ಷಸರನ್ನು ಶಿಕ್ಷಿಸುವವನು. ಕುಮುದಾಕ್ಷ=ನೈದಿಲೆಯಂತಹ ಕಣ್ಣುಗಳಿರುವವನು. ದೇವಸಂಕುಲ ಪಕ್ಷ=ದೇವತೆಗಳ ಪಕ್ಷವನ್ನು ವಹಿಸಿದವನು. ನಿಗಮಾಧ್ಯಕ್ಷ=ವೇದಗಳ ಒಡೆಯ. ವರನಿಟಿಲಾಕ್ಷಸಖ=ಈಶ್ವರನ ಸ್ನೇಹಿತ.

ಚಿತ್ರಕೂಟನಿವಾಸ ವಿಶ್ವಾ
ಮಿತ್ರಕ್ರತುಸಂರಕ್ಷ ರವಿಶಶಿ
ನೇತ್ರ ಭವ್ಯಚರಿತ್ರ ಸದ್ಗುಣಗಾತ್ರ ಸತ್ಪಾತ್ರ
ಧಾತ್ರಿಜಾಂತಕ ಕಪಟನಾಟಕ
ಸೂತ್ರ ಪರಮಪವಿತ್ರ ಫಲ್ಗುನ
ಮಿತ್ರ ವಾಕ್ಯವಿಚಿತ್ರ ರಕ್ಷಿಸು ನಮ್ಮನನವರತ ॥ ೯ ॥

ಮಂಗಳಾತ್ಮಕ ದುರಿತತಿಮಿರಪ
ತಂಗ ಗರುಡತುರಂಗ ರಿಪುಮದ
ಭಂಗ ಕೀರ್ತಿತರಂಗ ಪುರಹರಸಂಗ ನೀಲಾಂಗ
ಅಂಗದ ಪ್ರಿಯನುಂಗಪಿತ ಕಾ
ಳಿಂಗಮರ್ಧನ ಅಮಿತಕರುಣಾ
ಪಾಂಗ ಶ್ರೀನರಸಿಂಗ ರಕ್ಷಿಸು ನಮ್ಮನನವರತ ॥ ೧೦ ॥

ದಾಶರಥಿ ವೈಕುಂಠನಗರನಿ
ವಾಸ ತ್ರೈಜಗಧೀಶ ಪಾಪವಿ
ನಾಶ ಪರಮವಿಲಾಸ ಹರಿ ಸರ್ವೇಶ ದೇವೇಶ
ವಾಸುದೇವ ದಿನೇಶ ಶತಸಂ
ಕಾಶ ಯದುಕುಲವಂಶತಿಲಕ ಪ
ರಾಶರಾನತ ದೇವ ರಕ್ಷಿಸು ನಮ್ಮನನವರತ ॥ ೧೧ ॥

೯ ವಿಶ್ವಾಮಿತ್ರಕ್ರತುಸಂರಕ್ಷ=ವಿಶ್ವಾಮಿತ್ರರ ಯಜ್ಞವನ್ನು ರಕ್ಷಿಸಿದವನು. ರವಿಶಶಿನೇತ್ರ=ಸೂರ್ಯಚಂದ್ರರೇ ಕಣ್ಣಾಗಿ ಉಳ್ಳವನು. ಧಾತ್ರಿಜಾಂತಕ=ನರಕಾಸುರನನ್ನು ಕೊಂದವನು. ಫಲ್ಗುನಮಿತ್ರ=ಅರ್ಜುನನ ಸ್ನೇಹಿತ. ವಾಕ್ಯವಿಚಿತ್ರ=ಹಲವುಬಗೆಯ ಮಾತುಗಳಲ್ಲಿ ವರ್ಣಿಸಲ್ಪಟ್ಟವನು.

೧೦ ದುರಿತತಿಮಿರ ಪತಂಗ=ಪಾಪವೆಂಬ ಕತ್ತಲೆಗೆ ಸೂರ್ಯ. ಗರುಡತುರಂಗ=ಗರುಡನೇ ವಾಹನನಾದವನು. ಕೀರ್ತಿತರಂಗ=ಕೀರ್ತಿವಂತ. ಪುರಹರಸಂಗ=ಈಶ್ವರನ ಸ್ನೇಹಿತ. ಅಮಿತ ಕರುಣಾಪಾಂಗ=ಮೇರೆ ಇಲ್ಲದ ಕರುಣಾಶಾಲಿ.

೧೧ ಪರಮವಿಲಾಸ=ಪರಮಲೀಲೆಯಲ್ಲಿ ಸಂತೋಷಪಡುವವನು. ದಿನೇಶಶತಸಂಕಾಶ=ನೂರು ಸೂರ್ಯರುಗಳ ಬೆಳಕುಳ್ಳವನು. ಪರಾಶರಾನತ ದೇವ=ಪರಾಶರ ಮುನಿಗಳಿಂದ ನಮಸ್ಕಾರ ಪಡೆಯುವ ದೇವ.

ಕುಂದಕುಡ್ಮಲರದನ ಪರಮಾ
ನಂದ ಹರಿ ಗೋವಿಂದ ಸನಕಸ
ನಂದವಂದಿತ ಸಿಂಧು ಬಂಧನ ಮಂದರಾದ್ರಿಧರ
ಇಂದಿರಾಪತಿ ವಿಜಯಸಖ ಅರ
ವಿಂದನಾಭ ಪುರಂದರಾರ್ಚಿತ
ನಂದಕಂದ ಮುಕುಂದ ರಕ್ಷಿಸು ನಮ್ಮನನವರತ || ೧೨ ||

ಬಾಣಬಾಹುಚ್ಛೇದ ರಾವಣ
ಪ್ರಾಣನಾಶನ ಪುಣ್ಯನಾಮ ಪು
ರಾಣಪುರುಷೋತ್ತಮ ನಿಪುಣ ಅಣುರೇಣು ಪರಿಪೂರ್ಣ
ಕ್ಷೋಣಿಪತಿ ಸುಲಲಿತ ಸುದರ್ಶನ
ಪಾಣಿ ಪಾಂಡವರಾಜಕಾರ್ಯಧು
ರೀಣ ಜಗನಿರ್ಮಾಣ ರಕ್ಷಿಸು ನಮ್ಮನನವರತ || ೧೩ ||

ನೀಲವರ್ಣ ವಿಶಾಲಶುಭಗುಣ
ಶೀಲ ಮುನಿಕುಲಪಾಲ ಲಕ್ಷ್ಮೀ
ಲೋಲ ರಿಪುಶಿಶುಪಾಲಮಸ್ತಕಶೂಲ ವನಮಾಲ
ಮೂಲಕಾರಣ ವಿಮಲ ಯಾದವ
ಜಾಲಹಿತ ಗೋಪಾಲ ಅಗಣಿತ
ಲೀಲ ಕೋಮಲಕಾಯ ರಕ್ಷಿಸು ನಮ್ಮನನವರತ || ೧೪ ||

೧೨ ಕುಂದಕುಡ್ಮಲರದನ=ಮಲ್ಲಿಗೆಯ ಮೊಗ್ಗಿನಂತಹ ಹಲ್ಲುಗಳಿಂದ ಬೆಳಗುವವನು. ಸಿಂಧು ಬಂಧನ=ಸಮುದ್ರಕ್ಕೆ ಸೇತುವೆಯನ್ನು ಕಟ್ಟಿದ ಮಹಾಪುರುಷ (ಶ್ರೀರಾಮ). ಮಂದರಾದ್ರಿಧರ=ಮಂದರ ಪರ್ವತವನ್ನು ಎತ್ತಿ ಹಿಡಿದವನು (ವಿಷ್ಣು). ವಿಜಯಸಖ=ಅರ್ಜುನನ ಸ್ನೇಹಿತ. ಅರವಿಂದನಾಭ=ಹೊಕ್ಕುಳಲ್ಲಿ ಕಮಲವಿರುವವನು (ವಿಷ್ಣು). ಪುರಂದರಾರ್ಚಿತ=ಇಂದ್ರನಿಂದ ಪೂಜೆ ಪಡೆದವನು.

೧೩ ಬಾಣಬಾಹುಚ್ಛೇದ=ಬಾಣಾಸುರನ ಬಾಹುಗಳನ್ನು ಕತ್ತರಿಸಿದವನು. (ಬಾಣನೆಂಬ ರಾಕ್ಷಸ ಬಲಿಯ ಮಗ. ಅವನಿಗೆ ಒಂದು ಸಾವಿರ ತೋಳುಗಳಿದ್ದವು. ಯುದ್ಧದಲ್ಲಿ ಶ್ರೀಕೃಷ್ಣನು ೯೯೮ ತೋಳುಗಳನ್ನು ಕತ್ತರಿಸಿದನು). ಅಣುರೇಣು ಪರಿಪೂರ್ಣ= ಅಣುರೇಣುಗಳನ್ನು ತುಂಬಿದವನು. ಕ್ಷೋಣಿಪತಿ=ಪೃಥ್ವೀಪತಿ.

೧೪ ವಿಶಾಲಶುಭಗುಣಶೀಲ=ಅನಂತಶುಭಗುಣಗಳುಳ್ಳವನು. ರಿಪುಶಿಶುಪಾಲಮಸ್ತಕಶೂಲ= ಶತ್ರುವಾದ ಶಿಶುಪಾಲನ ತಲೆಗೆ ಶೂಲವಾದವನು. ಮೂಲಕಾರಣ=ಜಗತ್ತಿಗೆ ಮೂಲ ಕಾರಣನಾದವನು. ಯಾದವಜಾಲಹಿತ=ಯಾದವಕುಲಕ್ಕೆ ಒಳ್ಳೆಯದನ್ನು ಮಾಡಿದವನು. ಅಗಣಿತಲೀಲ=ಅನಂತವಾದ ಲೀಲೆಯುವನು.

ನಾಗನಗರಿಧರಿತ್ರಿ ಕೋಶವಿ
ಭಾಗ ತಂತ್ರನಿಯೋಗ ಗಮನ ಸ
ರಾಗ ಪಾಂಡವರಾಜಜಿತಸಂಗ್ರಾಮ ನಿಸ್ಸೀಮ
ಯೋಗಗಮ್ಯ ಭವಾಬ್ಧಿ ವಿಷಧರ
ನಾಗಗಾರುಡಮಂತ್ರವಿದ ಭವ
ರೋಗವೈದ್ಯ ವಿಚಿತ್ರ ರಕ್ಷಿಸು ನಮ್ಮನನವರತ || ೧೫ ||

ಶ್ರೀಮದುತ್ಸಹ ದೇವಸುತ ಶ್ರೀ
ರಾಮ ನಿನ್ನಯ ಚರಣಸೇವಕ
ಪ್ರೇಮದಿಂ ಸಾಷ್ಟಾಂಗವೆರಗಿಯೆ ಮಾಳ್ಪೆ ಬಿನ್ನಪವ
ಈ ಮಹಿಯೊಳೀವರೆಗೆ ನಾವು ಸು
ಕ್ಷೇಮಿಗಳು ನಿನ್ನಯ ಪದಾಬ್ಜ
ಕ್ಷೇಮವಾರ್ತೆಯನರುಹಿ ರಕ್ಷಿಸು ನಮ್ಮನನವರತ || ೧೬ ||

ಈಗಲೀ ಮರ್ಯಾದೆಯಲಿ ಶರ
ಣಾಗತರ ಸೇವೆಯೊಳು ಹೊಂಪುಳಿ
ಯಾಗಿ ಬಾಳುವರೇನು ಧನ್ಯರೊ ಹರ ಮಹಾದೇವ
ಭೋಗಭಾಗ್ಯವ ಬಯಸಿ ಮುಕ್ತಿಯ
ನೀಗಿ ನಿಮ್ಮನು ಭಜಿಸಲರಿಯದ
ರಾಗಿಗಳ ಮಾತೇನು ರಕ್ಷಿಸು ನಮ್ಮನನವರತ || ೧೭ ||

೧೫ ನಾಗನಗರಿಧರಿತ್ರಿ ಕೋಶವಿಭಾಗ ತಂತ್ರನಿಯೋಗಗಮನ ಸರಾಗ=ಹಸ್ತಿನಾವತಿಯ ರಾಜ್ಯದ ಕೋಶಗಳನ್ನು ವಿಭಾಗಿಸಿ ಪಾಂಡವರಿಗೆ ಅವರ ಪಾಲನ್ನು ಕೊಡಿಸುವುದಕ್ಕಾಗಿ ರಾಯಭಾರಿಯಾಗಿ ಹೋದವನು. ಪಾಂಡವರಾಜ ಜಿತ ಸಂಗ್ರಾಮ ನಿಸ್ಸೀಮ=ಧರ್ಮರಾಯನು ಗೆದ್ದ ಯುದ್ಧದಲ್ಲಿ ಮುಖ್ಯಪಾತ್ರವನ್ನು ನಿರ್ವಹಿಸಿದವನು. ಯೋಗಗಮ್ಯ=ಯೋಗಮಾರ್ಗದಿಂದ ತಿಳಿಯಲು ಸಾಧ್ಯನಾದವನು. ಭವಾಬ್ಧಿ ವಿಷಧರ ನಾಗಗಾರುಡ ಮಂತ್ರವಿದ=ಸಂಸಾರವೆಂಬ ಸಮುದ್ರದಲ್ಲಿ ಕ್ರೂರ ಸರ್ಪಗಳಿವೆ. ಇವನ್ನು ಪರಿಹರಿಸುವ ಗರುಡಮಂತ್ರವನ್ನು ಬಲ್ಲವನು. (ಸಂಸಾರಸಾಗರದ ವಿಪತ್ತುಗಳಿಂದ ಪರಿಹಾರ ಮಾಡುವವನು.)

೧೬ ಶ್ರೀಮದುತ್ಸಹ ದೇವಸುತ=ಉತ್ಸಾಹದಿಂದ ದೇವತೆಗಳು ಯಾರನ್ನು ಸ್ತುತಿಸುವರೋ ಅವನು. ಮಹಿ=ಜಗತ್ತು. ಪದಾಬ್ಜ=ಅಡಿದಾವರೆ.

೧೭ ಈ ಮರ್ಯಾದೆಯಲಿ=ಈ ಒಳ್ಳೆಯ ರೀತಿಯಲ್ಲಿ. ಹೊಂಪುಳಿಯಾಗಿ=ರೋಮಾಂಚನಗೊಂಡು. ಮುಕ್ತಿಯ ನೀಗಿ=ಪ ೧ಕ್ತಿಯನ್ನು ಬಯಸದೆ. ರಾಗಿಗಳ=ವಿಷಯಸುಖದಲ್ಲಿ ಮನಸ್ಸುಳ್ಳವರ.

ಭಕ್ತಿಸಾರದ ಚರಿತೆಯನು ಹರಿ
ಭಕ್ತರಾಲಿಸುವಂತೆ ರಚಿಸುವೆ
ಯುಕ್ತಿಯಲಿ ಬರೆದೋದಿದವರಿಷ್ಟಾರ್ಥ ಸಿದ್ಧಿಪುದು
ಮುಕ್ತಿಗಿದು ನೆಲೆದೋರುವುದು ಹರಿ
ಭಕ್ತರಿದನಾಲಿಪುದು ನಿಜಮತಿ
ಭಕ್ತಿಗೊಲಿವಂದದಲಿ ರಕ್ಷಿಸು ನಮ್ಮನನವರತ ॥ ೧೮ ॥

ನಳಿನಲೋಚನ ನಿನ್ನ ಮೂರ್ತಿಯು
ಕಳೆ ಬೆಳಗುತಿದೆ ಲಹರಿಯಲಿ ಭೂ
ತಳದೊಳಚ್ಚರಿಯಾದ ನಾಮಾಮೃತ ಸಮುದ್ರದಲಿ
ಬಳಸುವರು ಸತ್ಕವಿಗಳವರ
ಗ್ಗಳಿಕೆಯೆನಗಿನಿತಿಲ್ಲ ಸನ್ಮತಿ
ಗಳಿಗೆ ಮಂಗಳವಿತ್ತು ರಕ್ಷಿಸು ನಮ್ಮನನವರತ ॥ ೧೯ ॥

ಗಿಳಿಯು ಮರಿಯನು ತಂದು ಪಂಜರ
ದೊಳಗೆ ಪೋಷಿಸಿ ಕಲಿಸಿ ಮೃದುನುಡಿ
ಗಳನು ಲಾಲಿಸಿ ಕೇಳ್ವ ಪರಿಣತರಂತೆ ನೀನೆನಗೆ
ತಿಳುಹು ಮತಿಯನು ಎನ್ನ ಜಿಹ್ವೆಗೆ
ಮೊಳಗುವಂದದಿ ನಿನ್ನ ನಾಮಾ
ವಳಿಯ ಪೊಗಳಿಕೆಯಿತ್ತು ರಕ್ಷಿಸು ನಮ್ಮನನವರತ ॥ ೨೦ ॥

೧೮ ಹದಿನೆಂಟರಿಂದ ಇಪ್ಪತ್ತಮೂರನೆಯ ಪದ್ಯ ಪೂರ್ತಿ ಕನಕದಾಸರು 'ಹರಿಭಕ್ತಿಸಾರ'ವನ್ನು ರಚಿಸುವ ಉದ್ದೇಶವನ್ನು ದೇವರಿಗೆ ನಿವೇದಿಸಿ, ಅವನೇ ಮಾರ್ಗದರ್ಶನ ಮಾಡಬೇಕೆಂದು ಪ್ರಾರ್ಥಿಸುತ್ತಾರೆ. ನೆಲೆದೋರುವುದು=ದಾರಿಯನ್ನು ತೋರಿಸುವುದು. ಆಲಿಪುದು=ಕೇಳಬೇಕು. ನಿಜಮತಿ ಭಕ್ತಿಗೊಲಿವಂದದಲಿ=ನಮ್ಮ ಬುದ್ಧಿಯು ಭಕ್ತಿಯತ್ತ ಒಲಿಯುವಂತೆ.

೧೯ ನಳಿನಲೋಚನ=ಕಮಲದಂತಹ ಕಣ್ಣುಳ್ಳವನು. ಲಹರಿಯಲಿ=ಅಲೆಅಲೆಯಾಗಿ. ಅಚ್ಚರಿಯಾದ=ಆಶ್ಚರ್ಯಕರವಾದ. ಅಗ್ಗಳಿಕೆ=ಶಕ್ತಿ (ಒಳ್ಳೆಯ ಕವಿಗಳು ನಿನ್ನ ಸೌಂದರ್ಯವನ್ನು ಸೊಗಸಾಗಿ ವರ್ಣಿಸುತ್ತಾರೆ. ಅವರ ಶಕ್ತಿಯು ನನಗಿಲ್ಲ)

೨೦ ಪರಿಣತರು=ಜಾಣರು. ಜಿಹ್ವೆ=ನಾಲಗೆ.

ಪೊಗಲಳವೇ ನಿನ್ನ ನಾಮವ
ಸುಗುಣ ಸಚ್ಚಾರಿತ್ರ ಕಥನವ
ನಗಣಿತೋಪಮ ಅಮಿತವಿಕ್ರಮಗಮ್ಯ ನೀನೆಂದು
ನಿಗಮತತಿ ಕೈವಾರಿಸುತ ಪದ
ಯುಗವ ಕಾಣದೆ ಬಳಲುತಿದೆ ವಾ
ಸುಕಿಶಯನ ಸರ್ವೇಶ ರಕ್ಷಿಸು ನಮ್ಮನನವರತ ‖ ೨೧ ‖

ವೇದ ಶಾಸ್ತ್ರ ಪುರಾಣ ಪುಣ್ಯದ
ಹಾದಿಯನು ನಾನರಿಯೆ ತರ್ಕದ
ವಾದದಲಿ ಗುರುಹಿರಿಯರರಿಯದ ಮೂಢಮತಿಯೆನಗೆ
ಆದಿಮೂರುತಿ ನೀನು ನೆರೆ ಕರು
ಣೋದಯನು ಹೃದಯಾಂಗಣದಿ ಜ್ಞಾ
ನೋದಯವನೆನಗಿತ್ತು ರಕ್ಷಿಸು ನಮ್ಮನನವರತ ‖ ೨೨ ‖

ಹಸಿವರಿತು ತಾಯ್ ತನ್ನ ಶಿಶುವಿಗೆ
ಒಸೆದು ಮೊಲೆ ಕೊಡುವಂತೆ ನೀ ಪೋ
ಷಿಸದೆ ಬೇರಿನ್ನಾರು ಪೋಷಕರಾಗಿ ಸಲಹುವರು
ಬಸಿರೊಳಗೆ ಬ್ರಹ್ಮಾಂಡಕೋಟಿಯ
ಪಸರಿಸಿದ ಪರಮಾತ್ಮ ನೀನೆಂ
ದುಸಿರುತಿವೆ ವೇದಗಳು ರಕ್ಷಿಸು ನಮ್ಮನನವರತ ‖ ೨೩ ‖

೨೧ ಅಳವೇ=ಸಾಧ್ಯವೇ ? ಅಗಣಿತೋಪಮ ಅಮಿತವಿಕ್ರಮ ಗಮ್ಯ=ನಿನಗೆ ಹೋಲಿಸಲು ಉಪಮಾನವೇ ಇಲ್ಲ. ನಿಗಮತತಿ=ವೇದಗಳು. ಕೈವಾರಿಸುತ=ಹೊಗಳುತ್ತ. ವಾಸು ಕಿಶಯನ=ಆದಿಶೇಷನ ಮೇಲೆ ಮಲಗಿರುವವನು.

೨೨ ತರ್ಕದ ವಾದದಲಿ ಗುರುಹಿರಿಯರರಿಯದ ಮೂಢಮತಿ=ತರ್ಕದ ವಾದವನ್ನು ಕಲಿಸುವ ಗುರು ಹಿರಿಯರು ಯಾರು ಎಂದೇ ನನಗೆ ಗೊತ್ತಿಲ್ಲ. ಅಂತಹ ದಡ್ಡ ನಾನು. ಹೃದಯಾಂಗಣದಿ ಜ್ಞಾನೋದಯ=ಹೃದಯ ಎಂಬ ಪ್ರದೇಶದಲ್ಲಿ ಜ್ಞಾನ ಉದಯ ವಾಗುವುದು.

೨೩ ಒಸೆದು=ಪ್ರೀತಿಯಿಂದ. ಬಸಿರೊಳಗೆ ಬ್ರಹ್ಮಾಂಡ ಕೋಟಿಯ ಪಸರಿಸಿದ ಪರಮಾತ್ಮ= ಹೊಟ್ಟೆಯಲ್ಲಿ ಕೋಟಿ ಬ್ರಹ್ಮಾಂಡಗಳನ್ನು ತುಂಬಿಕೊಂಡ ಪರಮಾತ್ಮ.

ಇಬ್ಬರಣುಗರು ನಿನಗೆಯುವರೊಳ
ಗೊಬ್ಬ ಮಗನೀರೇಳು ಲೋಕದ
ಹೆಬ್ಬೆಳೆಸು ಬೆಳೆವಂತೆ ಕಾರಣಕರ್ತನಾದವನು
ಒಬ್ಬ ಮಗನದ ಬರೆವ ಕರಣಿಕ
ರಿಬ್ಬರೇ ಲೋಕಪ್ರಸಿದ್ಧರು
ಹಬ್ಬಿಸಿದೆ ಪ್ರಾಣಿಗಳ ರಕ್ಷಿಸು ನಮ್ಮನನವರತ || ೨೪ ||

ಸಿರಿಯು ಕುಲಸತಿ ಸುತನು ಕಮಲಜ
ಹಿರಿಯ ಸೊಸೆ ಶಾರದೆ ಸಹೋದರಿ
ಗಿರಿಜೆ ಮೈದುನ ಶಂಕರನು ಸುರರೆಲ್ಲ ಕಿಂಕರರು
ನಿರುತ ಮಾಯೆಯು ದಾಸಿ ನಿಜಮಂ
ದಿರವಜಾಂಡವು ಜಂಗಮಸ್ಥಾ
ವರ ಕುಟುಂಬಿಗ ನೀನು ರಕ್ಷಿಸು ನಮ್ಮನನವರತ || ೨೫ ||

ಸಾಗರನ ಮಗಳರಿಯದಂತೆ ಸ
ರಾಗದಲಿ ಸಂಚರಿಸುತಿಹ ವು
ದ್ಯೋಗವೇನು ನಿಮಿತ್ತ ಕಾರಣವಿಲ್ಲ ಲೋಕದಲಿ
ಭಾಗವತರಾದವರ ಸಲಹುವ
ನಾಗಿ ಸಂಚರಿಸುವುದು ಈ ಭವ
ಸಾಗರದಿ ಮುಳುಗಿಸದೆ ರಕ್ಷಿಸು ನಮ್ಮನನವರತ || ೨೬ ||

೨೪ ಇಪ್ಪತ್ತನಾಲ್ಕನೆಯ ಪದ್ಯದಿಂದ ನಲವತ್ತಾರನೆಯ ಪದ್ಯದವರೆಗೆ ಪುರಾಣಕಥೆಗಳಲ್ಲಿ ನಿರೂಪಿತವಾದಂತೆ ಹರಿಯ ಮಹಿಮೆಯನ್ನು ಕನಕದಾಸರು ಹೊಗಳುತ್ತಾರೆ. ಅಣುಗರು=ಮಕ್ಕಳು. ಈರೇಳು ಲೋಕದ ಹೆಬ್ಬೆಳಸು ಬೆಳೆವಂತೆ ಕಾರಣಕರ್ತ= ಹದಿನಾಲ್ಕು ಲೋಕಗಳೂ ಬೆಳೆಯುವಂತೆ ಮಾಡುವವನು (ಮನ್ಮಥ, ಕಾಮ) ಅದ ಬರೆವ ಕರಣಿಕ=ಅದನ್ನು ಬರೆಯುತ್ತ ಹೋಗುವ ಕರಣಿಕ (ಬ್ರಹ್ಮ).

೨೫ ಕಮಲಜ=ಬ್ರಹ್ಮ. ನಿರುತ=ಸದಾ. ನಿಜಮಂದಿರ=ಮಜಾಂಡವು=ವಿಶ್ವವೇ ಮನೆ ಜಂಗಮ=ಚಲಿಸುವುದು. ಸ್ಥಾವರ=ಸ್ಥಿರವಾದುದು.

೨೬ ಸಾಗರನ ಮಗಳು=ಲಕ್ಷ್ಮಿ. ನಿಮಿತ್ತ ಕಾರಣವಿಲ್ಲ=ಕಾರಣ ತಿಳಿಯಲಿಲ್ಲ. ಭಾಗವತ ರಾದವರ=ಭಕ್ತರನ್ನು, ಭವಸಾಗರದಿ=ಸಂಸಾರ ಎಂಬ ಸಾಗರದಲ್ಲಿ.

ಹಸ್ತಿವಾಹನನಾದಿಯಾದ ಸ
ಮಸ್ತ ದೇವನಿಕಾಯದೊಳಗೆ ಪ್ರ
ಶಸ್ತನಾವನು ನಿನ್ನವೋಲ್ ಶರಣಾಗತರ ಪೊರೆವ
ಹಸ್ತ ಕಲಿತಸುದರ್ಶನದೊಳರಿ
ಮಸ್ತಕವನಿಳುಹುವ ಪರಾತ್ಮರ
ವಸ್ತುವಲ್ಲವೆ ನೀನು ರಕ್ಷಿಸು ನಮ್ಮನನವರತ || ೨೭ ||

ಹಗೆಯರಿಗೆ ವರವೀವರಿಬ್ಬರು
ತೆಗೆಯಲರಿಯರು ಕೊಟ್ಟ ವರಗಳ
ತೆಗೆದುಕೊಡುವ ಸಮರ್ಥರಾರೀ ಜಗಕೆ ನಿನ್ನಂತೆ
ಸುಗುಣರಿನ್ನಾರುಂಟು ಕದನವ
ಬಗೆದು ನಿನ್ನೊಳು ಜಯಿಸುವವರೀ
ಜಗದೊಳುಂಟೇ ದೇವ ರಕ್ಷಿಸು ನಮ್ಮನನವರತ || ೨೮ ||

ಸುಮನಸರ ವೈರದಲಿ ಕೆಲಬರು
ಕುಮತಿಗಳು ತಪದಿಂದ ಭರ್ಗನ
ಕಮಲಜನ ಪದಯುಗವ ಮೆಚ್ಚಿಸಿ ವರವ ಪಡೆದಿಹರು
ಸಮರ ಮುಖದೊಳಗುಪಮೆಯಲಿ ವಿ
ಕ್ರಮದಿ ವೈರವ ಮಾಡಿದವರಿಗೆ
ಅಮರಪದವಿಯನಿತ್ತೆ ರಕ್ಷಿಸು ನಮ್ಮನನವರತ || ೨೯ ||

೨೭ ಹಸ್ತಿವಾಹನ=ಇಂದ್ರ. ದೇವನಿಕಾಯ=ದೇವತೆಗಳ ಸಮೂಹ. ಪ್ರಶಸ್ತನಾದವನು=ಶ್ರೇಷ್ಠನಾದವನು. ಹಸ್ತಕಲಿತ ಸುದರ್ಶನದೊಳರಿಮಸ್ತಕವನಿಳುಹುವ=ಕೈಯಲ್ಲಿ ಸುದರ್ಶನ ಚಕ್ರವನ್ನು ಹಿಡಿದು ಶತ್ರುಗಳ ತಲೆಯನ್ನು ಕತ್ತರಿಸುವ.

೨೮ ಹಗೆಯರಿಗೆ ವರವೀವರಿಬ್ಬರು=ಇಬ್ಬರು (ಬ್ರಹ್ಮ, ಈಶ್ವರ) ಶತ್ರುಗಳಾದ ರಾಕ್ಷಸರಿಗೆ ಅವರು ಕೇಳಿದ ವರಗಳನ್ನು ಕೊಡುತ್ತಾರೆ. ತೆಗೆಯಲರಿಯರು=ಹಿಂದಕ್ಕೆ ತೆಗೆದುಕೊಳ್ಳಲಾರರು. ಕದನವ ಬಗೆದು ನಿನ್ನೊಳು=ನಿನ್ನೊಡನೆ ಕದನವನ್ನು ಬಯಸಿ.

೨೯ ಸುಮನಸರ=ದೇವತೆಗಳ. ಕುಮತಿಗಳು=ದುಷ್ಟಬುದ್ಧಿಯವರು. ಭರ್ಗನ=ಈಶ್ವರನ ಕಮಲಜ=ಬ್ರಹ್ಮ. ಸಮರಮುಖದೊಳಗೆ=ಯುದ್ಧದಲ್ಲಿ, ವಿಕ್ರಮದಿ=ಪರಾಕ್ರಮದಿಂದ ಅಮರ ಪದವಿ=ದೇವಪದವಿ.

ಬಲಿಯ ಬಂಧಿಸಿ ನೊರೆಯಿಡುವ ಸತಿ
ಗೊಲಿದು ಅಕ್ಷಯವಿತ್ತು ಕರುಣದಿ
ನೊಲೆಯನುಣಿಸಿದ ಬಾಲಿಕೆಯ ಪಿಡಿದಸುವನಪಹರಿಸಿ
ಶಿಲೆಯ ಸತಿಯಳ ಮಾಡಿ ತ್ರಿಪುರರ
ಲಲನೆಯರ ವ್ರತಗೆಡಿಸಿ ಕೂಡಿದ
ಕೆಲಸವುತ್ತಮವಾಯ್ತು ರಕ್ಷಿಸು ನಮ್ಮನನವರತ ॥ ೩೦ ॥

ಕರಿಯ ಕಾಯ್ದ್ದಾ ಜಲದಿ ಮಕರವ
ತರಿದು ಹಿರಣ್ಯಾಕ್ಷಕನ ಸೀಳ್ದು
ತರಳನನು ತಲೆಗಾಯ್ದು ಶಕಟಾಸುರನ ಹತಮಾಡಿ
ದುರುಳ ಕಂಸನ ಕೊಂದು ಮಗಧನ
ಮುರಿದು ವತ್ಸನ ಹಮ್ಮಳಿಸಿ ಖರ
ಹರಣವನು ಹಿಂಗಿಸಿದೆ ರಕ್ಷಿಸು ನಮ್ಮನನವರತ ॥ ೩೧ ॥

ಶಿಶುತನದ ಸಾಮರ್ಥ್ಯದಲಿ ಕೆಲ
ರಸುರರನು ಸಂಹರಿಸಿ ಚಕ್ರವ
ಬಿಸುಟು ಯೌವನ ಕಾಲದಲಿಯಾಪಾಂಡುಸುತರಿಂದ
ವಸುಮತಿಯ ಭಾರವನಿಳುಹಿ ಸಾ
ಹಸದಿ ಮೆರೆದವನಾಗಿ ನೀ ಮೆ
ಚ್ಚಿಸಿದೆ ತ್ರಿಜಗವನೆಲ್ಲ ರಕ್ಷಿಸು ನಮ್ಮನನವರತ ॥ ೩೨ ॥

೩೦ ನೊರೆಯಿಡುವ ಸತಿಗೊಲಿದು=ನೊರೆ ಇಟ್ಟ ದ್ರೌಪದಿಗೆ ಅಕ್ಷಯವಸ್ತ್ರವನ್ನು ಕರುಣಿಸಿ. ನೊಲೆಯನುಣಿಸಿದ ಬಾಲಿಕೆಯ ಪಿಡಿದಸುವನಪಹರಿಸಿ=ಮೊಲೆಯನ್ನುಣಿಸಿದ ಪೂತನಿಯನ್ನು ಕೊಂದು. ತ್ರಿಪುರರ ಲಲನೆಯರ ವ್ರತಗೆಡಿಸಿ=ತ್ರಿಪುರಾಸುರರ ಪತ್ನಿಯರ ವ್ರತವನ್ನು ಕೆಡಿಸಿ (ತಾರಾಕ್ಷ, ಕಮಲಾಕ್ಷ, ವಿದ್ಯುನ್ಮಾಲಿ ಇವರು ತ್ರಿಪುರಾಸುರರು, ತಾರಕಾಸುರನ ಮಕ್ಕಳು)

೩೧ ಕರಿಯ ಕಾಯ್ದ್ದಾ ಜಲದಿ ಮಕರವ ತರಿದು=ನೊಸಳೆಯನ್ನು ಕೊಂದು ಗಜೇಂದ್ರನನ್ನು ಕಾಪಾಡಿದೆ. ಮಗಧ=ಶಿಶುಪಾಲ. ವತ್ಸನ ಹಮ್ಮಳಿಸಿ=ವತ್ಸ ಎಂಬ ರಾಕ್ಷಸನನ್ನು ಕೊಂದು. ಖರ ಹರಣವನು ಹಿಂಗಿಸಿದೆ=ಖರನನ್ನು ಕೊಂದೆ (ಖರನು ಶೂರ್ಪಣಖಿಯ ಅಣ್ಣ. ಶೂರ್ಪಣಖಿಯ ಕಿವಿ ಮೂಗುಗಳನ್ನು ಕೊಯ್ದು ಕಳುಹಿಸಿದ ನಂತರ ಖರನು ಸೇನೆಯೊಡನೆ ರಾಮನನ್ನು ಇದಿರಿಸಿದ. ರಾಮನು ಅವನನ್ನು ಕೊಂದ.)

೩೨ ಶಿಶುತನದ ಸಾಮರ್ಥ್ಯದಲಿ=ಶಿಶುವಾಗಿದ್ದಾಗಲೇ ನಿನ್ನ ಶಕ್ತಿಯಿಂದ (ಕೃಷ್ಣನು ಮಗುವಾಗಿದ್ದಾಗಲೇ ಶಕಟಾಸುರ, ಪೂತನಿ ಮೊದಲಾದವರನ್ನು ಕೊಂದ) ಚಕ್ರವ ಬಿಸುಟು=ಯೌವನ ಕಾಲದಲ್ಲಿ ಕೃಷ್ಣನು ಮಹಾಭಾರತದ ಯುದ್ಧದಲ್ಲಿ ಸುದರ್ಶನ ಚಕ್ರವನ್ನು ಹಿಡಿಯಲಿಲ್ಲ. ವಸುಮತಿ=ಭೂಮಿ.

ಎಲ್ಲರಲಿ ನೀನಾಗಿ ಸುಮನಸ
ರಲ್ಲಿಯತಿಹಿತನಾಗಿ ಯಾದವ
ರಲ್ಲಿ ಬಾಂಧವನಾಗಿ ದಾನವರಲ್ಲಿ ಹಗೆಯಾಗಿ
ಕೊಲ್ಲಿಸಿದೆ ಭೀಮಾರ್ಜುನರ ಕೈ
ಯಲ್ಲಿ ಕೌರವಕುಲವನೆಲ್ಲವ
ಬಲ್ಲಿದನು ನೀನಹುದು ರಕ್ಷಿಸು ನಮ್ಮನನವರತ || ೩೩ ||

ನರಗೆ ಸಾರಥಿಯಾಗಿ ರಣದೊಳು
ತುರಗ ನೀರಡಿಸಿದರೆ ವಾರಿಯು
ಸರಸಿಯನು ನಿರ್ಮಿಸಿ ಕಿರೀಟಿಯು ಕೈಲಿ ಸೈಂಧವನ
ಶಿರವ ಕೆಡುಹಿಸಿ ಅವನ ತಂದೆಯ
ಕರತಳಕೆ ನೀಡಿಸಿದೆ ಹರ ಹರ
ಪರಮಸಾಹಸಿ ನೀನು ರಕ್ಷಿಸು ನಮ್ಮನನವರತ || ೩೪ ||

ಬವರದಲಿ ಖತಿಗೊಂಡು ಗದೆಯೊಳು
ಕವಿದು ನಿನ್ನ ಶ್ರುತಾಯುಧನು ಹೊ
ಕ್ಕವಘುಡಿಸಿ ಹೊಯ್ದಾಡಿ ತನ್ನಾಯುಧದಿ ತಾ ಮಡಿದ
ವಿವರವೇನೋ ತಿಳಿಯೆನೀ ಮಾ
ಯವನು ನೀನೇ ಬಲ್ಲೆ ನಿನ್ನಾ
ಯವನು ಬಲ್ಲವರುಂಟೆ ರಕ್ಷಿಸು ನಮ್ಮನನವರತ || ೩೫ ||

೩೩ ಸುಮನಸರಲ್ಲಿಯತಿಹಿತನಾಗಿ=ದೇವತೆಗಳಿಗೆ ಬಹು ಹಿತವನ್ನು ಮಾಡುವನಾಗಿ. ಬಲ್ಲಿದನು=ಸಮರ್ಥನು.

೩೪ ನರಗೆ=ಅರ್ಜುನನಿಗೆ. ತುರಗ ನೀರಡಿಸಿದರೆ ವಾರಿಯ ಸರಸಿಯನು ನಿರ್ಮಿಸಿ=ಕುದುರೆಗಳಿಗೆ ಬಾಯಾರಿಕೆಯಾದಾಗ ನೀರಿನ ಕೊಳವನ್ನೇ ನಿರ್ಮಿಸಿ. ಕಿರೀಟಿ=ಅರ್ಜುನ. ಅವನ ತಂದೆಯ ಕರತಳಕೆ ನೀಡಿಸಿದೆ=ಸೈಂಧವನ ತಲೆಯನ್ನು ಯಾರು ನೆಲಕ್ಕೆ ಬೀಳಿಸುತ್ತಾರೋ ಅವರ ತಲೆ ಸಹಸ್ರ ಹೋಳಾಗಲೆಂದು ಅವನ ತಂದೆ ಕ್ಷತ್ರನು ಶಾಪ ಕೊಟ್ಟಿದ್ದನು. ಆದ್ದರಿಂದ ಸೈಂಧವನ ತಲೆಯು ಅವನ ತಂದೆಯ ತೊಡೆಯ ಮೇಲೆ ಬೀಳುವಂತೆ ಬಾಣ ಹೊಡೆಯಲು ಕೃಷ್ಣನು ಅರ್ಜುನನಿಗೆ ಹೇಳಿದನು. ಸಂಧ್ಯಾವಂದನೆ ಮಾಡುತ್ತಿದ್ದ ಕ್ಷತ್ರನ ಕೈಗಳಿಗೆ ಅದು ಬಿದ್ದಿತು. ಅಲ್ಲಿಂದ ಅದು ಕೆಳಕ್ಕೆ ಬಿದ್ದಾಗ ಅವನ ತಲೆಯೇ ಹೋಳಾಯಿತು.

೩೫ ಬವರ=ಯುದ್ಧ. ಅವಘುಡಿಸಿ=ಹೀಯಾಳಿಸಿ (ಶ್ರುತಾಯುಧ ವರುಣನ ಮಗ. ವರುಣನು ಅವನಿಗೆ ಗದೆಯನ್ನು ಕೊಟ್ಟಾಗ, ಅದನ್ನು ಯುದ್ಧ ಮಾಡದಿರುವವರ ಮೇಲೆ ಪ್ರಯೋಗಿಸಬಾರದೆಂದು ಹೇಳಿದನು. ಸಾರಥಿಯಾಗಿದ್ದ ಕೃಷ್ಣನ ಮೇಲೆ ಪ್ರಯೋಗಿಸಿದಾಗ ಆ ಗದೆಯೇ ಶ್ರುತಾಯುಧನನ್ನು ಕೊಂದಿತು.) ಆಯವನು=ಸಂಕಲ್ಪವನ್ನು.

ಇಳೆಗೆ ಪತಿಯಾದವನು ಯಾದವ
ರೊಳಗೆ ಬಾಂಧವ ನಿನಗೆ ಸೋದರ
ದಳಿಯನಾದಭಿಮನ್ಯುವನು ಕೊಲ್ಲಿಸಿದೆ ಕೊಳಗುಳದಿ
ಅಳಲಿನಬುಧಿಯೊಳದ್ದಿ ತಂಗಿಯ
ಬಳಲಿಸಿದೆ ಕುಲಗೋತ್ರ ಬಾಂಧವ
ರೊಳಗೆ ಕೀರ್ತಿಯ ಪಡೆದೆ ರಕ್ಷಿಸು ನಮ್ಮನನವರತ || ೩೬ ||

ತಾಯನಗಲಿದ ತನಯನೀ ರಾ
ಧೇಯನೊಳಗೆ ರಹಸ್ಯದಲಿ ಕುಲ
ದಾಯವನು ನೆರೆ ತಿಳುಹಿಯರ್ಜುನನಿಂದ ಕೊಲ್ಲಿಸಿದೆ
ಮಾಯಮಂತ್ರದ ಕುಟಿಲಗುಣದ-
ನ್ಯಾಯವೋ ಇದು ನ್ಯಾಯವೋ ನಿ
ನ್ನಾಯವನು ನೀ ಬಲ್ಲೆ ರಕ್ಷಿಸು ನಮ್ಮನನವರತ || ೩೭ ||

ಕೊಲ್ಲ ಬಗೆದವನಾಗಿ ನೀ ಹಗೆ
ಯಲ್ಲಿ ಸಖ್ಯವ ಬೆಳಸಲದು ಹಿತ
ವಲ್ಲ ನಿನ್ನಯ ಗುಣವ ಬಲ್ಲವರಿಲ್ಲ ಯದುಕುಲದಿ
ಗೊಲ್ಲನಾರಿಯರೊಳು ಪ್ರವರ್ತಕ
ನಲ್ಲವೇ ಭಾವಿಸಲು ಲೋಕದೊ
ಳೆಲ್ಲರೂ ಸರಿ ನಿನಗೆ ರಕ್ಷಿಸು ನಮ್ಮನನವರತ || ೩೮ ||

೩೬ ಕೊಳಗುಳದಿ=ಯುದ್ಧದಲ್ಲಿ. ಅಳಲು=ದುಃಖ. ಅಬುಧಿ=ಸಮುದ್ರ. ತಂಗಿ=ಕೃಷ್ಣನ ತಂಗಿ ಸುಭದ್ರೆ. ಕುಲಗೋತ್ರಬಾಂಧವರೊಳಗೆ ಕೀರ್ತಿಯ ಪಡೆದೆ=ನಿನ್ನ ತಂಗಿಯ ಮಗನನ್ನೇ ಸಾಯಲು ಬಿಟ್ಟು ಅವಳನ್ನು ಅಪಾರ ಶೋಕಕ್ಕೆ ಗುರಿ ಮಾಡಿಯೂ ನಿನ್ನ ಬಂಧುಗಳಲ್ಲಿ ಒಳ್ಳೆಯ ಹೆಸರನ್ನೇ ಪಡೆದೆ. ನಿನ್ನ ಉದ್ದೇಶವನ್ನು ಯಾರು ತಿಳಿಯಲು ಸಾಧ್ಯ ?

೩೭ ರಾಧೇಯ=ಕರ್ಣ (ರಾಧೆ ಎಂಬುವಳು ಸಾಕಿದ್ದರಿಂದ ರಾಧೇಯ). ಕುಲದಾಯವನು=ಕುಲದ ರಹಸ್ಯವನ್ನು. ಮಾಯಾಮಂತ್ರದ ಕುಟಿಲಗುಣದನ್ಯಾಯವೋ ಇದು ನ್ಯಾಯವೋ=ಮಾಯೆ ಮಂತ್ರಗಳನ್ನು ಬಳಸಿ ಮೋಸ ಮಾಡುವ ಈ ಬಗೆ ಅನ್ಯಾಯವೋ, ನ್ಯಾಯವೋ. ಆಯ=ಉದ್ದೇಶ.

೩೮ ಕೊಲ್ಲಬಗೆದವನಾಗಿ=ಕೊಲ್ಲುವ ಉದ್ದೇಶದಿಂದಲೇ. ಪ್ರವರ್ತಕನಲ್ಲವೇ ?=ಪ್ರೀತಿ ಬೆಳೆಸಿದವನಲ್ಲವೇ ? ಭಾವಿಸಲು=ಯೋಚಿಸಿ ನೋಡಿದರೆ. ಎಲ್ಲರೂ ಸರಿ ನಿನಗೆ=ನಿನಗೆ ಎಲ್ಲರೂ ಒಂದೇ.

ಮಗನ ಕೊಂದವನಾಳುವಂತಾ
ಸುಗಣೆಯರು ಹದಿನಾರು ಸಾವಿರ
ಸೊಗಸುಗಾತಿಯರವರ ಮೋಹದ ಬಲೆಗೆ ವಿಟನಾಗಿ
ಬಗೆಬಗೆಯ ರತಿಕಲೆಗಳಲಿ ಕೂ
ರುಗರ ನಾಟಿಸಿ ಮೆರೆದು ನೀನೀ
ಜಗಕೆ ಪಾವನನಾದೆ ರಕ್ಷಿಸು ನಮ್ಮನನವರತ || ೩೯ ||

ಏನು ಮಾಡಿದರೇನು ಕರ್ಮವ
ನೀನೊಲಿಯದಿನ್ನಿಲ್ಲವಿದಕನು
ಮಾನವುಂಟೇ ಭ್ರಮರಕೀಟನ್ಯಾಯದಂದದಲಿ
ನೀನೊಲಿಯೆ ತೃಣ ಪರ್ವತವು ಪುಸಿ
ಯೇನು ನೀ ಪತಿಕರಿಸೆ ಬಳಿಕಿ
ನ್ನೇನು ಚಿಂತಿಸಲೇಕೆ ರಕ್ಷಿಸು ನಮ್ಮನನವರತ || ೪೦ ||

ಎಷ್ಟು ಮಾಡಲು ಮುನ್ನ ತಾ ಪಡೆ
ವಷ್ಟೆಯೆಂಬುದ ಲೋಕದೊಳು ಮತಿ
ಗೆಟ್ಟ ಮಾನವರಾಡುತಿಹರಾ ಮಾತದಂತಿರಲಿ
ಪಟ್ಟವಾರಿಂದಾಯ್ತು ಧ್ರುವನಿಗೆ
ಕೊಟ್ಟ ವರ ತಪ್ಪಿತೆ ಕುಚೇಲನಿ
ಗಿಷ್ಟ ಬಾಂಧವ ನೀನು ರಕ್ಷಿಸು ನಮ್ಮನನವರತ || ೪೧ ||

೩೯ ಮಗನ ಕೊಂದು=ನರಕಾಸುರನನ್ನು ಕೊಂದು (ವಿಷ್ಣುವು ವರಾಹಾವತಾರ ತಾಳಿದಾಗ ಅವನ ಬೆವರಿನ ಒಂದು ಹನಿಯು ಭೂಮಿಯಲ್ಲಿ ಬಿದ್ದು ನರಕಾಸುರನ ಜನನವಾಯಿತು). ಸುಗುಣೆಯರು=ಸೊಗಸುಗಾರ್ತಿಯರು. ಕೂರುಗುರ=ಹರಿತವಾದ ಉಗುರನ್ನು.

೪೦ ಭ್ರಮರಕೀಟನ್ಯಾಯ=ದುಂಬಿಯು ಕ್ರಿಮಿಯನ್ನು ತನ್ನ ಗೂಡಿನಲ್ಲಿಟ್ಟು ಗುಂಯ್ ಎಂದು ಶಬ್ದ ಮಾಡುತ್ತ ಅದರ ಸುತ್ತ ಸುತ್ತುತ್ತದೆ. ಕೆಲವು ದಿನಗಳಲ್ಲಿ ಕ್ರಿಮಿಯು ದುಂಬಿಯಾಗಿಬಿಡುತ್ತದೆ. ತೃಣ=ಹುಲ್ಲು ಸಹ. ಪತಿಕರಿಸೆ=ಅನುಗ್ರಹ ಮಾಡಿದರೆ (ದುಂಬಿಯು ಕೀಟವನ್ನು ದುಂಬಿಯನ್ನು ಮಾಡಿದ ಹಾಗೆ ನೀನು ಹುಲ್ಲು ಕಡ್ಡಿಯನ್ನು ಪರ್ವತವನ್ನಾಗಿ ಮಾಡಬಲ್ಲೆ).

೪೧ ಮುನ್ನ=ಹಿಂದೆ (ಹಿಂದಿನ ಜನ್ಮದಲ್ಲಿ). ಮತಿಗೆಟ್ಟ ಮಾನವರು=ಬುದ್ಧಿ ಇಲ್ಲದ ಜನರು (ದೇವರ ಅನುಗ್ರಹವಾದರೆ ಎಲ್ಲವೂ ಸಾಧ್ಯ ಎಂದು ಪದ್ಯದ ಭಾವ).

ತನ್ನ ದೇಹಾತುರದಲಡವಿಯೊ
ಲನ್ಯರನು ಸಂಹರಿಸುತಿರುತಿರೆ
ನಿನ್ನ ನಾಮದೊಳಧಿಕವೆರಡಕ್ಷರವ ಬಣ್ಣಿಸುತ
ಧನ್ಯನಾದನು ಮುನಿಕುಲದ ಸಂ
ಪನ್ನನಾದನು ನೀನೊಲಿದ ಬಳಿ
ಕಿನ್ನು ಪಾತಕವುಂಟೆ ರಕ್ಷಿಸು ನಮ್ಮನನವರತ || ೪೨ ||

ನಿನ್ನ ಸತಿಗಳುಪಿದ ದುರಾತ್ಮನ
ಬೆನ್ನಿನಲಿ ಬಂದವನ ಕರುಣದಿ
ಮನ್ನಿಸಿದ ಕಾರಣ ದಯಾಪರಮೂರ್ತಿಯೆಂದೆನುತ
ನಿನ್ನ ಭಜಿಸಿದ ಸಾರ್ವಭೌಮ:ರಿ
ಗಿನ್ನು ಇಹಪರವುಂಟು ಸದ್ಗುಣ
ರನ್ನ ಸಿರಿಸಂಪನ್ನ ರಕ್ಷಿಸು ನಮ್ಮನನವರತ || ೪೩ ||

ವೀರರಾವಣನೊಡನೆ ಹೋರಿದ
ವೀರರಗ್ಗದ ಕಪಿಗಳವರೊಳು
ಮಾರುತನ ಮಗನೇನು ಧನ್ಯನೊ ಬ್ರಹ್ಮಪಟ್ಟದಲಿ
ಸೇರಿಸಿದೆ ನಿನ್ನಂತೆ ಕೊಡುವ ಉ
ದಾರಿ ಯಾವನು ತ್ರಿಜಗದೊಳಗಾ
ಕಾರಣದಿ ನಂಬಿದೆನು ರಕ್ಷಿಸು ನಮ್ಮನನವಗತ || ೪೪ ||

ಶಿವಶಿವಾ ನೀ ಮಾಡಿದುಪಕಾ
ರವನು ಮರೆತವರುಂಟೆ ಪಾಪದಿ
ನವೆದಜಾಮಿಳಗೊಲಿದು ಪ್ರಾಣವಿಯೋಗಕಾಲದಲಿ
ಜವನವರ ಕಯ್ಗೊಪ್ಪಿಸದೆ ಕಾ
ಯ್ದವನು ನೀ ಮಾಧವನು ಮಿಕ್ಕಾ
ದವರಿಗುಂಟೇ ಕರುಣ ರಕ್ಷಿಸು ನಮ್ಮನನವರತ || ೪೫ ||

೪೨ ದೇಹಾತುರದಲಿ=ದೇಹದ ಪೋಷಣೆಗಾಗಿ. ಅನ್ಯರನ=ಇತರರನ್ನು. ಅಧಿಕವೆರಡಕ್ಷರವ ಬಣ್ಣಿಸುತ=ಶ್ರೇಷ್ಠವಾದ 'ರಾಮ' ಎನ್ನುವ ಎರಡು ಅಕ್ಷರಗಳನ್ನು ಜಪಿಸುತ್ತ. ಮುನಿಕುಲದ ಸಂಪನ್ನನಾದನು=ಮುನಿಗಳಲ್ಲಿ ಶ್ರೇಷ್ಠನಾದನು (ವಾಲ್ಮೀಕಿ).

೪೩ ನಿನ್ನ ಸತಿಗಳುಪಿದ ದುರಾತ್ಮನ=ಸೀತೆಯನ್ನು ಬಯಸಿದ ರಾವಣನ. ಬೆನ್ನಿನಲಿ ಬಂದವನ=ತಮ್ಮನ (ವಿಭೀಷಣನನ್ನು).

೪೪ ಮಾರುತನ ಮಗ=ಹನುಮಂತ.

೪೫ ಪಾಪದಿನವೆದಜಾಮಿಳ=ಇಡೀ ಜೀವಮಾನದಲ್ಲಿ ಪಾಪಗಳನ್ನೆ ಮಾಡಿದ ಅಜಾಮಿಳ. (ಸಾಯುವ ಕಾಲದಲ್ಲಿ ತನ್ನ ಮಗ ನಾರಾಯಣನ ಹೆಸರನ್ನು ಕರೆದುದರಿಂದ ಶ್ರೀಮನ್ನಾರಾಯಣನು ಆತನಿಗೆ ಸದ್ಗತಿಯನ್ನು ಕೊಟ್ಟನು). ಜವ=ಯಮ.

ಹೆತ್ತ ಮಗಳನು ಮದುವೆಯಾದವ
ನುತ್ತಮನು ಗುರುಪತ್ನಿಗಳುಪಿದ
ಚಿತ್ತಜನು ಮಾವನ ಕೃತಘ್ನನು ನಿನಗೆ ಮೈದುನನು
ಹೊತ್ತು ತಪ್ಪಿಸಿ ಕಾಮುದಲಿ ಮುನಿ
ಪೋತ್ತಮನ ಮಡದಿಯನು ನೆರೆದವ
ಗಿತ್ತೆ ಕೈವಲ್ಯವನು ರಕ್ಷಿಸು ನಮ್ಮನನವರತ || ೪೬ ||

ಇಲ್ಲಿಹನು ಅಲ್ಲಿಲ್ಲವೆಂಬೀ
ಸೊಲ್ಲು ಸಲ್ಲದು ಹೊರಗೊಳಗೆ ನೀ
ನಲ್ಲದಿಲ್ಲನ್ಯತ್ರವೆಂಬುದನೆಲ್ಲ ಕೆಲಕೆಲವರು
ಬಲ್ಲರಿಳೆಯೊಳು ಭಾಗವತರಾ
ದೆಲ್ಲರಿಗೆ ವಂದಿಸದ ಕುಜನರಿ
ಗಿಲ್ಲ ಸದ್ಗತಿ ನೋಡು ರಕ್ಷಿಸು ನಮ್ಮನನವರತ || ೪೭ ||

ಸಿರಿಯ ಸಂಪತ್ತಿನಲಿ ನೀ ಮೈ
ಮರೆದು ಮದಗರ್ವದಲಿ ದೀನರ
ಕರುಣದಿಂದೀಕ್ಷಿಸದೆ ಕಡೆಗಣ್ಣಿಂದ ನೋಡುವರೆ
ಹರ ಹರ ಅನಾಥರನು ಪಾಲಿಸಿ
ವರವ ಕೊಡುವ ಉದಾರಿಯೆಂಬೀ
ಬಿರುದ ಬಿಡುವರೇ ತಂದೆ ರಕ್ಷಿಸು ನಮ್ಮನನವರತ || ೪೮ ||

೪೬ ಹೆತ್ತಮಗಳನ್ನು ಮದುವೆಯಾದವನು=ತನ್ನ ಮಗಳಾದ ಸರಸ್ವತಿಯನ್ನು ಮದುವೆಯಾದ ಬ್ರಹ್ಮ. ಗುರುಪತ್ನಿಗೆ ಅಳುಪಿದ ಚಿತ್ತಜನು ಮಾವನ ಕೃತಘ್ನನು=ಗುರುವಾದ ಬೃಹಸ್ಪತಿಯ ಹೆಂಡತಿಯಾದ ತಾರೆಯನ್ನು ಕಾಮಿಸಿದ ಚಂದ್ರನು. ಇವನು ದಕ್ಷ ಬ್ರಹ್ಮನ ಅಳಿಯ. ದಕ್ಷಬ್ರಹ್ಮನ ೨೭ ಮಂದಿ ಪುತ್ರಿಯರನ್ನು ಮದುವೆಯಾದರೂ ರೋಹಿಣಿಯೊಬ್ಬಳನ್ನೇ ಪ್ರೀತಿಸಿದ. ಆದರಿಂದ ಮಾವನಿಗೆ ಕೃತಘ್ನ. ಹೊತ್ತು ತಪ್ಪಿಸಿ ಕಾಮುದಲಿ ಮುನಿಪೋತ್ತಮನ ಮಡದಿಯನು ನೆರೆದವಗಿತ್ತೆ ಕೈವಲ್ಯವನು= ಗೌತಮ ಮುನಿಯ ಹೆಂಡತಿ ಅಹಲ್ಯೆಯನ್ನು ಕಾಮಿಸಿ ಹೊತ್ತು ತಪ್ಪಿಸಿ ಬಂದ ಇಂದ್ರನಿಗೆ ಶ್ರೇಷ್ಠ ಪದವಿಯನ್ನು ನೀಡಿದೆ. (ಭಕ್ತರು ಪಾಪಕೆಲಸಗಳನ್ನು ಮಾಡಿದರೂ ಭಗವಂತನು ಕ್ಷಮಿಸಿ ಉದ್ಧರಿಸುತ್ತಾನೆ.)

೪೭ ನಲವತ್ತೇಳನೆಯ ಪದ್ಯದಿಂದ ಒಂದುನೂರ ಒಂದನೆಯ ಪದ್ಯದವರೆಗೆ ಕನಕದಾಸರು ಮನುಷ್ಯನ ನಿಸ್ಸಹಾಯಕತೆ, ಮನುಷ್ಯ ತಾಯಿಯ ಹೊಟ್ಟೆಯಲ್ಲಿ ಮಾಂಸರಕ್ತಗಳ ಮಧ್ಯೆ ಇದ್ದು ಹೊರಕ್ಕೆ ಬಂದದ್ದು, ದೇಹದ ನಶ್ವರತೆ, ಭಗವಂತನ ಕರುಣೆ, ಅವನ ಶಕ್ತಿ, ಮನುಷ್ಯ ಬಹಿರಾಚರಣೆಗೆ ಪ್ರಾಮುಖ್ಯತೆ ಕೊಡದೆ ಭಗವಂತನಲ್ಲಿ ಮನಸ್ಸನ್ನು ನಿಲ್ಲಿಸುವ ಅಗತ್ಯ ಇವನ್ನು ವಿವರಿಸುತ್ತಾರೆ.
ಇಲ್ಲನ್ಯತ್ರ=ಬೇರೆ ಸತ್ಯವಾದ ಮಾತಿಲ್ಲ. ಕುಜನರು=ಕೆಟ್ಟವರು.

೪೮ ಸಿರಿಯ ಸಂಪತ್ತಿನಲಿ=ಲಕ್ಷ್ಮೀಲೋಲನಾಗಿ.

ದೀನನಾನು ಸಮಸ್ತ ಲೋಕಕೆ
ದಾನಿ ನೀನು ವಿಚಾರಿಸಲು ಮತಿ
ಹೀನ ನಾನು ಮಹಾಮಹಿಮ ಕೈವಲ್ಯಪತಿ ನೀನು
ಏನ ಬಲ್ಲೆನು ನಾನು ನೆರೆ ಸು
ಜ್ಞಾನಮೂರುತಿ ನೀನು ನಿನ್ನ ಸ
ಮಾನರುಂಟೇ ದೇವ ರಕ್ಷಿಸು ನಮ್ಮನನವರತ || ೪೯ ||

ತರಳತನದಲಿ ಕೆಲವು ದಿನದುರು
ಭರದ ಗರ್ವದಿ ಕೆಲವು ದಿನ ಮೈ
ಮರೆದು ನಿಮ್ಮಡಿಗೆರಗದಾದೆನು ವಿಷಯಕೇಳಿಯಲಿ
ನರಕಭಾಜನನಾಗಿ ಕಾಮಾ
ತುರದಿ ಪರಧನ ಪರಸತಿಗೆ ಮನ
ಹರಿದ ಪಾಪವ ಕಳೆದು ರಕ್ಷಿಸು ನಮ್ಮನನವರತ || ೫೦ ||

ಮರೆದೆನಭ್ಯುದಯದಲಿ ನಿಮ್ಮನು
ಮರೆಯೆನಾಪತ್ತಿನಲಿ ಪೊರೆಯೆಂ
ದೊರೆಯುವೆನು ಮನನೇಕ ಭಾವದೊಳಿಲ್ಲ ನಿಮ್ಮಡಿಯ
ಮರೆದು ಬಾಹಿರನಾದವನ ನೀ
ಮರೆವರೇ ಹಸು ತನ್ನ ಕಂದನ
ಮರೆವುದೇ ಮಮತೆಯಲಿ ರಕ್ಷಿಸು ನಮ್ಮನನವರತ || ೫೧ ||

ಧಾರಿಣಿಗೆ ವರ ಚಕ್ರವರ್ತಿಗ
ಳಾರು ಮಂದಿ ನೃಪಾಲಕರು ಹದಿ
ನಾರು ಮಂದಿಯು ಧರಣಿಯನು ಮುನ್ನಾಳ್ದ ನೃಪರೆನಿತೋ

೪೯ ಕೈವಲ್ಯಪತಿ=ಮೋಕ್ಷವನ್ನು ಕೊಡುವವನು.

೫೦ ತರಳತನದಲಿ=ಹುಡುಗಾಟಿಕೆಯಲ್ಲಿ. ಉರುಭರದ=ಯೌವನದ. ವಿಷಯ ಕೇಳಿಯಲಿ= ದೇಹದ ಸುಖದಲ್ಲಿ. ನರಕಭಾಜನನಾಗಿ=ನರಕಕ್ಕೆ ಹೋಗಲು ಯೋಗ್ಯನಾಗಿ.

೫೧ ಅಭ್ಯುದಯದಲಿ=ಸುಖದಲ್ಲಿ, ಮೇಲೇರುತ್ತಿದ್ದಾಗ. ಪೊರೆ=ಕಾಪಾಡು. ಏಕಭಾವದೊಳಿಲ್ಲ=ಒಂದೇ ಸ್ಥಿತಿಯಲ್ಲಿಲ್ಲ. ಮರೆದು ಬಾಹಿರನಾದವನ=ನಿಮ್ಮನ್ನು ಮರೆತು ದುಷ್ಟನಾದವನನ್ನು.

ವೀರರನು ಮೆಚ್ಚದಳೆ ಧರಣೀ
ನಾರಿ ಬಹು ಮೋಹದೊಳು ನಿನ್ನನು
ಸೇರಿಯೋಲಯಿಸುವಳು ರಕ್ಷಿಸು ನಮ್ಮನನವರತ || ೫೨ ||

ಭಾರಕರ್ತನು ನೀನು ಬಹು ಸಂ
ಸಾರಿಯೆಂಬುದ ನಿಗಮತತಿ ಕೈ
ವಾರಿಸುತ್ತಿದೆ ದಿವಿಜಮನುಜಭುಜಂಗದೊಳಗಿನ್ನು
ಆರಿಗುಂಟು ಸ್ವತಂತ್ರ ನಿನ್ನಂ
ತಾರು ಮುಕ್ತಿಯನೀವ ಸದ್ಗುರು
ವಾರು ಜಗದಧ್ಯಕ್ಷ ರಕ್ಷಿಸು ನಮ್ಮನನವರತ || ೫೩ ||

ಗತಿವಿಹೀನರಿಗಾರು ನೀನೇ
ಗತಿಕಣಾ ಪತಿಕರಿಸಿಕೊಡು ಸ
ದ್ಗತಿಯ ನೀನೆಲೆ ದೇವ ನಿನಗಪರಾಧಿ ನಾನಲ್ಲ
ಶ್ರುತಿವಚನವಾಡುವುದು ಶರಣಾ
ಗತರ ಸೇವಕನೆಂದು ನಿನ್ನನು
ಮತವಿಡಿದು ನಂಬಿದೆನು ರಕ್ಷಿಸು ನಮ್ಮನನವರತ || ೫೪ ||

ಈಗಲೋ ಈ ದೇಹವಿನ್ನಾಶಿ
ವಾಗಲೋ ನಿಜವಿಲ್ಲವೆಂಬುದ
ನೀಗ ತಿಳಿಯದೆ ಮಡದಿ ಮನೆ ಮನೆವಾರ್ತೆಯೆಂದೆಂಬ

೫೨ ಧಾರಿಣಿಗೆ=ಭೂಮಿಗೆ. (ಆರುಮಂದಿ ಚಕ್ರವರ್ತಿಗಳು=ನಳ, ಹರಿಶ್ಚಂದ್ರ, ಪುರುಕುತ್ಸ, ಪುರೂರವಸ್, ಸಗರ, ಕಾರ್ತವೀರ್ಯ). ಧರಣಿಯನು ಮುನ್ನಾಳ್ದ ನೃಪರೆನಿತೋ= ಇವರಲ್ಲದೆ ಹಿಂದೆ ಆಳಿದ ರಾಜರು ಎಷ್ಟು ಮಂದಿಯೋ! ಬಹುಮೋಹದೊಳು ನಿನ್ನನು ಸೇರಿಯೋಲಯಿಸುವಳು=ಯಾವ ಮನುಷ್ಯಮಾತ್ರನನ್ನು ಮೆಚ್ಚದೆ, ಸ್ಥಿರವಾಗಿ ನಿನ್ನನೇ ಮೆಚ್ಚಿ ಆಶ್ರಯ ಬಯಸಿದ್ದಾಳೆ.

೫೩ ಭಾರಕರ್ತನು=ಹೊಣೆಹೊತ್ತವನು. ಬಹುಸಂಸಾರಿ=ಜಗತ್ತೆಲ್ಲ ನಿನ್ನ ಸಂಸಾರ. ನಿಗಮತತಿ ಕೈವಾರಿಸುತ್ತಿದೆ=ವೇದಗಳು ಹೊಗಳುತ್ತಿವೆ. ದಿವಿಜಮನುಜಭುಜಂಗ= ದೇವತೆಗಳು, ಮನುಷ್ಯರು, ನಾಗರು. ಜಗದಧ್ಯಕ್ಷ=ಜಗತ್ತಿಗೇ ಪ್ರಭು, ಜಗತ್ತನ್ನು ನಡೆಸಿಕೊಂಡು ಹೋಗುವವನು.

೫೪ ಪತಿಕರಿಸಿ=ದಯೆತೋರಿ. ಶ್ರುತಿವಚನ=ವೇದಗಳ ವಾಣಿ. ಮತವಿಡಿದು=ಮನಸ್ಸಿಟ್ಟು.

ರಾಗಲೋಭದಿ ಮುಳುಗಿ ಮುಂದಣ
ತಾಗುಬಾಗುಗಳರಿಯೆ ನಿನ್ನ ಸ
ಮಾಗಮವ ಬಯಸುವೆನು ರಕ್ಷಿಸು ನಮ್ಮನನವರತ ॥ ೫೫ ॥

ಮಾಂಸ ರಕ್ತದ ಮಡುವಿನಲಿ ನವ
ಮಾಸ ಜನನಿಯು ಜಠರದೊಳಗಿರು
ವಾ ಸಮಯದಲಿ ವೃತ್ತಿಯನು ಕಲ್ಪಿಸಿದ ಪ್ರಭುವಾರು
ನೀ ಸಲಹಿದವನಲ್ಲವೇ ಕರು
ಣಾಸಮುದ್ರನು ನೀನಿರಲು ಕಮ
ಲಾಸನನ ಹಂಗೇಕೆ ರಕ್ಷಿಸು ನಮ್ಮನನವರತ ॥ ೫೬ ॥

ಬಲು ಮೃಗವು ಮರಪಕ್ಷಿ ಕೀಟಕ
ಜಲಜರೌಘದಿ ಜನಿಸಿದೆನು ಕೋ
ಟಲೆಗೊಳಿಸಬೇಡಕಟ ಮಾನವನಾದ ಬಳಿಕಿನ್ನು
ಕೊಲಿಸದಿರು ಯಮನಿಂದ ಮುರಹರ
ಒಲಿದು ನಿನ್ನನು ಭಜಿಸುವವರಿಗೆ
ಕೊಲೆಗೆ ಕಾರಣವೇನು ರಕ್ಷಿಸು ನಮ್ಮನನವರತ ॥ ೫೭ ॥

ಪಂಚಭೂತದ ಕಾಯದೊಳು ನೀ
ವಂಚಿಸದೆಯಿರುತಿರಲು ಪೂರ್ವದ
ಸಂಚಿತದ ಫಲವೆನ್ನಲೇಕಿದು ಮರುಳತನದಿಂದ

೫೫ ಮನೆವಾರ್ತೆ=ಮನೆಗೆಲಸ. ರಾಗಲೋಭದಿ=ರಾಗ, ಆಸೆ ಇವುಗಳಿಂದ, ವ್ಯಾಮೋಹದಿಂದ. ತಾಗುಬಾಗುಗಳರಿಯೆ=ಕಷ್ಟನಷ್ಟಗಳನ್ನು ನಾನು ತಿಳಿದಿಲ್ಲ. ಸಮಾಗಮವ=ಸೇರುವುದನ್ನು.

೫೬ ವೃತ್ತಿಯನು ಕಲ್ಪಿಸಿದ ಪ್ರಭುವಾರು?=ನನ್ನ ಯೋಗಕ್ಷೇಮವನ್ನು ನೋಡಿಕೊಂಡ ಸ್ವಾಮಿಯು ಯಾರು? (ನೀನೇ ಅಲ್ಲವೇ?). ಕಮಲಾಸನನ=ಬ್ರಹ್ಮನ.

೫೭ ಜಲಚರ=ಮೀನಿನಂತೆ ನೀರಿನಲ್ಲಿ ವಾಸಮಾಡುವ ಪ್ರಾಣಿ. ಔಘದಿ=ಸಮೂಹ. ಕೋಟಲೆ=ತೊಂದರೆ, ಕಷ್ಟ. ಮುರಹರ=ಮುರನನ್ನು ಕೊಂದವನು (ಮುರನು ನರಕಾಸುರನ ಪರಿವಾರದಲ್ಲಿದ್ದ ಒಬ್ಬ ರಾಕ್ಷಸ. ಶ್ರೀಕೃಷ್ಣನು ಅವನನ್ನು ಕೊಂದನು).

ಮಿಂಚುವವರಿನ್ನೆಂಟೆ ತಿಳಿಯೆ ಪ್ರ
ಪಂಚವೆಲ್ಲಕೆ ತಪ್ಪಿದವ ನೀ
ಕೊಂಚಗಾರನೆ ಕೃಷ್ಣ ರಕ್ಷಿಸು ನಮ್ಮನನವರತ ॥ ೫೮ ॥

ಹಲವು ಕರ್ಮಗಳಿಂದ ಮೂತ್ರದ
ಬಿಲಗಳಲಿ ಸಂಚರಿಸಿ ಪದವಿಯ
ಫಲವ ಕಾಣದೆ ಹೊಲಬುದಪ್ಪಿದೆನೆನ್ನ ದೇಹದಲಿ
ಒಲಿದು ನೀನಿರೆ ನಿನ್ನ ಸಲುಗೆಯ
ಒಲುಮೆಯಲಿ ಬರಸೆಳೆವೆ ಮುಕುತಿಯ
ಲಲನೆಯನೆ ತಳುವಿಲ್ಲ ರಕ್ಷಿಸು ನಮ್ಮನನವರತ ॥ ೫೯ ॥

ಎತ್ತಿದೆನು ನಾನಾ ಶರೀರವ
ಹೊತ್ತು ಹೊತ್ತಲಸಿದೆನು ಸಲೆ ಬೇ
ಸತ್ತು ನಿನ್ನಯ ಪದವ ಕಾಣದೆ ತೊಳಲಿ ಬಳಲಿದೆನು
ಸತ್ತು ಹುಟ್ಟುವ ಹುಟ್ಟಿ ಹಿಂಗುವ
ಸುತ್ತ ತೊಡಕನು ಮಾಣಿಸೆಲೆ ಪುರು
ಷೋತ್ತಮನೆ ಮನವೊಲಿದು ರಕ್ಷಿಸು ನಮ್ಮನನವರತ ॥ ೬೦ ॥

ಇಂದು ಈ ಜನ್ಮದಲಿ ನೀನೇ
ಬಂಧು ಹಿಂದಣ ಜನ್ಮದಲಿ ಬಳಿ
ಸಂದು ಮುಂದಣ ಜನ್ಮಕಧಿಪತಿಯಾಗಿ ಇರುತಿರಲು

೫೮ ಪಂಚಭೂತದ ಕಾಯದೊಳು=ಭೂಮಿ, ಅಗ್ನಿ, ನೀರು, ವಾಯು, ಆಕಾಶ ಈ ಪಂಚ ಭೂತಗಳಿಂದ ಆಗಿರುವ ದೇಹದಲ್ಲಿ. ವಂಚಿಸದೆ=ತಪ್ಪದೆ. ಪೂರ್ವಸಂಚಿತದ ಫಲವೆನ್ನಲೇಕಿದು?=ಈ ಶರೀರವು ನಾನು ಮಾಡಿದುದರ ಫಲ ಎಂದು ಏಕೆ ಹೇಳಬೇಕು? (ಅದು ನಿನ್ನ ಅನುಗ್ರಹದಿಂದ ಬಂದದ್ದು). ಮಿಂಚುವವರು=ಅಹಂಕಾರದಿಂದ ಮೆರೆಯುವವರು. ಪ್ರಪಂಚವೆಲ್ಲಕೆ ತಪ್ಪಿದವ=ಪ್ರಪಂಚವನ್ನು ಮೀರಿದವನು. ಕೊಂಚಗಾರನೆ=ಸಣ್ಣವನೆ? ಸಾಮಾನ್ಯನೆ?

೫೯ ಪದವಿಯ ಫಲವ ಕಾಣದೆ=ಒಳ್ಳೆಯ ಫಲವನ್ನು ಕಾಣದೆ. ಹೊಲಬು ತಪ್ಪಿದೆನು=ದಾರಿತಪ್ಪಿದೆನು. ತಳುವಿಲ್ಲ=ತಡವಾಗುವುದಿಲ್ಲ (ಮುಕ್ತಿಯನ್ನು ಪಡೆಯುವುದರಲ್ಲಿ ತಡವಾಗುವುದಿಲ್ಲ.)

೬೦ ಅಲಸಿದೆನು=ಕಷ್ಟಪಟ್ಟೆನು, ಆಯಾಸಗೊಂಡೆನು. ಮಾಣಿಸು=ಪರಿಹರಿಸು (ಸಾಯುವುದು. ಹುಟ್ಟುವುದು ಮತ್ತು ಸಾಯುವುದು ಹೀಗೆ ಕೊನೆ ಇಲ್ಲದ ತೊಡಕಿನಿಂದ ಪಾರು ಮಾಡು.)

ಎಂದಿಗೂ ತನಗಿಲ್ಲ ತನುಸಂ
ಬಂಧ ನಿನ್ನದು ಎನಗೆ ನೀ ಗತಿ
ಯೆಂದು ಬಿನ್ನವಿಸಿದೆನು ರಕ್ಷಿಸು ನಮ್ಮನನವರತ ॥ ೬೧ ॥

ಗಣನೆಯಿಲ್ಲದ ಜನನಿಯರು ಮೊಲೆ
ಯುಣಿಸಲಾ ಪಯಬಿಂದುಗಳನದ
ನೆಣಿಸಲಳವೇ ಸಪ್ತಸಾಗರಕಧಿಕವೆನಿಸಿಹುದು
ಬಣಗು ಕಮಲಜನದಕೆ ತಾನೇ
ಮಣೆಯಗಾರನು ಈತ ಮಾಡಿದ
ಕುಣಿಕೆಗಳ ನೀ ಬಿಡಿಸಿ ರಕ್ಷಿಸು ನಮ್ಮನನವರತ ॥ ೬೨ ॥

ಲೇಸಕಾಣೆನು ಜನನಮರಣದಿ
ಗಾಸಿಯಾದೆನು ನೊಂದೆನಕಟಾ
ಲೇಸೆನಿಸಿ ನೋಡಲು ಪರಾಪರವಸ್ತು ನೀನಾಗಿ
ನೀ ಸಲಹುವವನಲ್ಲವೇ ಕರು
ಣಾಸಮುದ್ರನು ನೀನಿರಲು ಕಮ
ಲಾಸನನ ಹಂಗೇನು ರಕ್ಷಿಸು ನಮ್ಮನನವರತ ॥ ೬೩ ॥

ಕಾಪುರುಷರೈದಾರು ಮಂದಿ ಸ
ಮೀಪದಲಿ ಕಾಡುವರು ಎನ್ನನು
ನೀ ಪರಾಮರಿಸದೆ ಪರಾಕಾಗಿಹುದು ಲೇಸಲ್ಲ
ಶ್ರೀ ಪದಾಬ್ಜದ ಸೇವೆಯಲಿ ನೆರೆ
ಪಾಪವನು ಪರಿಹರಿಸೆ ನೀ ನಿಜ
ರೂಪಿನಲಿ ಬಂದೊಲಿದು ರಕ್ಷಿಸು ನಮ್ಮನನವರತ ॥ ೬೪ ॥

೬೧ ತನುಸಂಬಂಧ ತನಗಿಲ್ಲ ನಿನ್ನದು=ಈ ದೇಹಕ್ಕೂ ನನಗೂ ಸಂಬಂಧವಿಲ್ಲ, ಅದರ ಒಡೆಯ ನೀನೇ, ದೇಹ ನಿನಗೆ ಸೇರಿದುದು.

೬೨ ಗಣನೆಯಿಲ್ಲದ ಜನನಿಯರು=(ಹಿಂದಿನ ಹಲವು ಜನ್ಮಗಳಲ್ಲಿ) ಲೆಕ್ಕವಿಲ್ಲದಷ್ಟು ಮಂದಿ ತಾಯಿಯರು. ಪಯಬಿಂದು=ಹಾಲಿನ ಹನಿಗಳು. ಅಳವೇ=ಸಾಧ್ಯವೇ. ಬಣಗು=ಅಲ್ಪ, ಕ್ಷುದ್ರ. ಮಣೆಯಗಾರ=ಹೊಣೆಗಾರ (ಅಧಿಕಾರಿ).

೬೩ ಲೇಸ=ಒಳ್ಳೆಯದನ್ನು. ಪರಾಪರವಸ್ತು=ಪರಾತ್ಪರವಸ್ತು, ಅತ್ಯಂತ ಪವಿತ್ರ ವಸ್ತು, ದಿವ್ಯವಸ್ತು. ಕಮಲಾಸನ=ಬ್ರಹ್ಮ.

೬೪ ಕಾಪುರುಷರು=(ಕಾಮ, ಕ್ರೋಧ, ಲೋಭ ಮೊದಲಾದ) ಕೆಟ್ಟ ಜನ. ಪರಾಮರಿಸದೆ ಪರಾಕಾಗಿಹುದು=ಅಲಕ್ಷ್ಯದಿಂದ ಇರುವುದು. ಶ್ರೀ ಪದಾಬ್ಜ=ಕಾಂತಿಯುಕ್ತವಾದ ಪಾದಕಮಲಗಳು.

ಐದು ತತ್ತ್ವಗಳಾದವೊಂದ
ಕ್ಕೈದು ಕಡೆಯುಲಿ ತತ್ತ್ವವಿಪ್ಪ
ತ್ತೈದು ಕೂಡಿದ ತನುವಿನಲಿ ವಂಚಿಸದೆ ನೀನಿರಲು
ಭೇದಿಸದೆ ಜೀವಾತ್ಮ ತಾ ಸಂ
ಪಾದಿಸಿದ ಸಂಚಿತಸುಕರ್ಮವ
ನಾದರಿಸಿ ಕಯ್ಕೊಂಡು ರಕ್ಷಿಸು ನಮ್ಮನನವರತ ‖ ೬೫ ‖

ಎಂಟು ಗೇಣಿನ ದೇಹ ರೋಮಗ
ಳೆಂಟು ಕೋಟಿಯ ಕೀಲ್ಗಳಿರುವ
ತ್ತೆಂಟು ಮಾಂಸಗಳಿಂದ ಮಾಡಿದ ಮನೆಯ ಮನವೊಲಿದು
ನೆಂಟ ನೀನಿರ್ದಗಲಿದಡೆ ಒಣ
ಹೆಂಟೆಯುಲಿ ಮುಚ್ಚುವರು ದೇಹದ
ಲುಂಟೆ ಫಲ ಪುರುಷಾರ್ಥ ರಕ್ಷಿಸು ನಮ್ಮನನವರತ ‖ ೬೬ ‖

ಸ್ನಾನ ಸಂಧ್ಯಾ ಧ್ಯಾನ ಜಪ ತಪ
ದಾನ ಧರ್ಮ ಪರೋಪಕಾರವಿ
ಹೀನಕರ್ಮದೊಳಿರುವೆನಲ್ಲದೆ ಬೇರೆ ಗತಿಯುಂಟೆ
ಏನು ಮಾಡಿದಡೇನು ಮುಕ್ತಿ
ಜ್ಞಾನವಿಲ್ಲದಡಿಲ್ಲ ಭಕ್ತಿಗೆ
ನೀನೆ ಕಾರಣನಾಗಿ ರಕ್ಷಿಸು ನಮ್ಮನನವರತ ‖ ೬೭ ‖

ಕೋಪವೆಂಬುದು ತನುವಿನಲಿ ನೆರೆ
ಪಾಪ ಪಾತಕದಿಂದ ನರಕದ
ಕೂಪದಲಿ ಮುಳುಗುವುದು ತಪ್ಪದು ಶಾಸ್ತ್ರಸಿದ್ಧವಲೆ

೬೫ ಐದು ತತ್ತ್ವಗಳಾದುವೊಂದಕ್ಕೆ=ಒಂದೇ ಮೂಲ ವಸ್ತುವು ಅಗ್ನಿ, ಜಲ, ವಾಯು, ಪೃಥ್ವಿ, ಆಕಾಶ ಮೊದಲಾದ ಐದು ತತ್ತ್ವಗಳಾಯಿತು. ಕಡೆಯುಲಿ ತತ್ತ್ವವಿಪ್ಪತ್ತೈದು ಕೂಡಿದ ತನುವಿನಲಿ=ಕಡೆಯುಲ್ಲಿ ಇಪ್ಪತ್ತೈದು ತತ್ವಗಳಾಗಿ ಈ ದೇಹವಾಯಿತು. ಭೇದಿಸದೆ ಜೀವಾತ್ಮ ತಾ ಸಂಪಾದಿಸಿದ ಸಂಚಿತ ಸುಕರ್ಮವ=(ನೀನು ದೇಹದಲ್ಲಿ ಇರುವಾಗ) ಜೀವಾತ್ಮನು ತಾನು ಗಳಿಸಿದ ಕರ್ಮದ ಫಲವನ್ನು ನಿವಾರಿಸಿಕೊಳ್ಳಲಾರನೆ?

೬೬ ನೆಂಟ ನೀನಿರ್ದಗಲಿದಡೆ=ನೆಂಟನಾದ ನೀನು ಇರುವವರೆಗೆ ದೇಹಕ್ಕೆ ಮನ್ನಣೆ. ನೀನು ಹೊರಟುಹೋದ ಮೇಲೆ ಇದು ಕೆಲಸಕ್ಕೆ ಬಾರದ್ದು.

೬೭ ವಿಹೀನ=ಇವನ್ನು ಬಿಟ್ಟು. ಮುಕ್ತಿ ಜ್ಞಾನವಿಲ್ಲದಡಿಲ್ಲ=ಜ್ಞಾನವಿಲ್ಲದೆ ಮೋಕ್ಷವಿಲ್ಲ.

ರಾಪು ಮಾಡದೆ ಬಿಡನು ಯಮನು ನಿ
ರಪರಾಧಿಯು ನೋಡಿ ಕೀರ್ತಿಕ
ಲಾಪವನು ನೀ ಕಾಯ್ದು ರಕ್ಷಿಸು ನಮ್ಮನನವರತ ॥ ೧೮ ॥

ನಿನ್ನ ಸೂತ್ರದೊಳಾಡುವುವು ಚೈ
ತನ್ಯ ಸಚರಾಚರಗಳೆಲ್ಲವು
ನಿನ್ನ ಸೂತ್ರವು ತಪ್ಪಿದರೆ ಮುಗ್ಗುವುವು ಹೂಹೆಗಳು
ಇನ್ನು ನಮಗೆ ಸ್ವತಂತ್ರವೆಲ್ಲಿಯ
ದನ್ಯ ಕರ್ಮ ಸುಕರ್ಮವೆಲ್ಲವ
ನಿನ್ನದೆಂದೊಪ್ಪಿಸಿದೆ ರಕ್ಷಿಸು ನಮ್ಮನನವರತ ॥ ೧೯ ॥

ಒಡೆಯ ನೀನೆಂದರಿತು ನಾ ನಿ
ನ್ನಡಿಯ ಭಜಿಸದೆ ದುರುಳನಾದೆನು
ಮಡದಿಮಕ್ಕಳ ಮೋಹದಲಿ ಮನ ಸಿಲುಕುತಡಿಗಡಿಗೆ
ಮಡದಿ ಯಾರೀ ಮಕ್ಕಳ್ಯಾರೀ
ಒಡಲಿಗೊಡೆಯನು ನೀನು ನೀ ಕೈ
ವಿಡಿದು ಮುದದಲಿ ಬಿಡದೆ ರಕ್ಷಿಸು ನಮ್ಮನನವರತ ॥ ೨೦ ॥

ಪಂಟಿಸಿದಮದಮುಖರು ಕೆಲಕೆಲ
ರುಂಟು ರಿಪುಗಳು ದಂಟಿಸುತ ಬಲು
ಕಂಟಕದಿ ಕಾಡುವರು ಕಾಯೈ ಕಲುಷಸಂಹಾರ
ಬಂಟನಲ್ಲವೆ ನಾನು ದೀನರ
ನಂಟನಲ್ಲವೆ ನೀನು ನಿನ್ನೊಳ
ಗುಂಟೆ ನಿರ್ದಯ ನೋಡಿ ರಕ್ಷಿಸು ನಮ್ಮನನವರತ ॥ ೨೧ ॥

೧೮ ಶಾಸ್ತ್ರಸಿದ್ಧವಲೆ=ಹೀಗೆಂದು ಶಾಸ್ತ್ರವೇ ತೀರ್ಮಾನಿಸಿದೆ ರಾಪು=ಪೀಡಿಸದೆ. ಯಮನು ನಿರಪರಾಧಿಯು=ನನ್ನನ್ನು ಶಿಕ್ಷಿಸುತ್ತಾನೆಂದು ಯಮನನ್ನು ಆಕ್ಷೇಪಿಸುವಂತಿಲ್ಲ, ಅವನ ತಪ್ಪಿಲ್ಲ. ಕೀರ್ತಿಕಲಾಪವನು ನೀ ಕಾಯ್ದು=(ಭಕ್ತನನ್ನು ಕೈಬಿಡವುದಿಲ್ಲ ಎಂಬ) ನಿನ್ನ ಕೀರ್ತಿಯನ್ನು ಕಾಪಾಡಿಕೊಂಡು.

೧೯ ಮುಗ್ಗುವುವು=ಮುಗ್ಗರಿಸುವುವು, ನಾಶವಾಗುತ್ತವೆ. ಹೂಹೆಗಳು=ಗೊಂಬೆಗಳು.

೨೦ ಮುದದಲಿ=ಸಂತೋಷದಿಂದ, ಪ್ರೀತಿಯಿಂದ.

೨೧ ಪಂಟಿಸಿದ=ಎದುರಿಸಿದ, ವಿರೋಧಿಗಳಾದ. ಮದಮುಖರು=ಮದ, ಮಾತ್ಸರ್ಯ ಮೊದಲಾದವರು. ರಿಪುಗಳು=ಶತ್ರುಗಳು. ದಂಟಿಸುತ=ದಂಡಿಸುತ್ತ. ಕಲುಷ ಸಂಹಾರ=ಪಾಪಗಳನ್ನು ನಾಶಮಾಡುವವನು.

ದಂಡಧರನುಪಟಳದಿ ಮಿಗೆ ಮುಂ
ಕೊಂಡು ಮೊರೆಯುಗುವವರ ಕಾಣೆನು
ಪುಂಡರೀಕೋದ್ಭವನ ಶಿರವನು ಕಡಿದು ತುಂಡಿಸಿದ
ಖಂಡಪರಶುವು ರುದ್ರಭೂಮಿಯೊ
ಳಂಡಲೆದು ತಿರುಗುವನು ನೀನು
ದ್ದಂಡ ದೇವರ ದೇವ ರಕ್ಷಿಸು ನಮ್ಮನನವರತ ॥ ೭೨ ॥

ಶಕ್ತಿಯೆಂಬುದು ಮಾಯೆ ಮಾಯಾ
ಶಕ್ತಿಯದು ತನುವಿನಲಿ ನೀ ನಿಜ
ಮುಕ್ತಿದಾಯಕನಿರಲು ಸುಖದುಃಖಾದಿಗಳಿಗಾರು
ಯುಕ್ತಿಯೊಳಗಿದನರಿತು ಮನದ ವಿ
ರಕ್ತಿಯಲಿ ಭಜಿಸುವಗೆ ಮುಕ್ತಿಗೆ
ಭಕ್ತಿಯೇ ಕಾರಣವು ರಕ್ಷಿಸು ನಮ್ಮನನವರತ ॥ ೭೩ ॥

ಮೂರು ಗುಣ ಮೊಳೆದೋರಿತದರೊಳು
ಮೂರು ಮೂರ್ತಿಗಳಾಗಿ ರಂಜಿಸಿ
ತೋರಿ ಸೃಷ್ಟಿಸ್ಥಿತಿಲಯಂಗಳ ರಚಿಸಿ ವಿಲಯದಲಿ
ಮೂರು ರೂಪೊಂದಾಗಿ ಪ್ರಳಯದ
ವಾರಿಯಲಿ ವಟಪತ್ರಶಯನದಿ
ಸೇರಿದವ ನೀನೀಗ ರಕ್ಷಿಸು ನಮ್ಮನನವರತ ॥ ೭೪ ॥

೭೨ ದಂಡಧರ=ಯಮ. ಮುಂಕೊಂಡು=ಹೆದರಿಕೊಂಡು. ಮೊರೆಯುಗುವವರ=ನಿನಗೆ ಮೊರೆಹೊಗುವವರನ್ನು. ಪುಂಡರೀಕೋದ್ಭವ=ಬ್ರಹ್ಮ. ಖಂಡ ಪರಶುವು=ಈಶ್ವರನು (ಬ್ರಹ್ಮನ ಒಂದು ತಲೆಯನ್ನು ಈಶ್ವರನು ಕತ್ತರಿಸಿದನೆಂದು ಪುರಾಣದ ಕಥೆ ಇದೆ. ಬ್ರಹ್ಮನು ತಾನೇ ತ್ರಿಮೂರ್ತಿಗಳಲ್ಲಿ ಶ್ರೇಷ್ಠ ಎಂದು ಅಹಂಕಾರಪಟ್ಟ. ಶಿವನನ್ನೂ ತಿರಸ್ಕಾರದಿಂದ ಕಂಡ. ಶಿವನು ಅವನ ಐದನೆಯ ತಲೆಯನ್ನು ಕಡಿದ. ಬ್ರಹ್ಮನಿಗೂ ಆಪತ್ತು ತಪ್ಪಿದ್ದಲ್ಲ.)

೭೩ ತನುವಿನಲಿ ನೀ ನಿಜ ಮುಕ್ತಿದಾಯಕನಿರಲು ಸುಖದುಃಖಾದಿಗಳಿಗಾರು=ದೇಹದಲ್ಲಿ ನೀನಿದ್ದೀಯೆ, ಮುಕ್ತಿಯನ್ನು ಕೊಡುವವನು ನೀನು, ಸುಖದುಃಖಗಳನ್ನು ಕೊಡಲು ಈ ಮಾಯಾಶಕ್ತಿ ಯಾರು?

೭೪ ಮೂರು ಗುಣಗಳು ಸತ್ತ್ವ, ರಜಸ್ಸು, ತಮಸ್ಸು. ಇವುಗಳಿಂದ ವಿಷ್ಣು, ಬ್ರಹ್ಮ, ರುದ್ರ ಎಂಬ ಮೂರ್ತಿಗಳನ್ನು ಧರಿಸಿ ಭಗವಂತನು ಸ್ಥಿತಿ, ಸೃಷ್ಟಿ, ಸಂಹಾರ ಈ ಕಾರ್ಯಗಳನ್ನು ರಚಿಸುತ್ತಾನೆ. ಪ್ರಳಯ ಕಾಲದಲ್ಲಿ ಈ ಮೂರು ಮೂರ್ತಿಗಳೂ ಭಗವಂತನಲ್ಲಿ ಲೀನವಾಗುತ್ತವೆ. ವಟಪತ್ರಶಯನದಿ=ಆಲದ ಎಲೆಯಲ್ಲಿ ಮಲಗಿರುವ.

ನೀರ ಮೇಲಣ ಗುಳ್ಳೆಯಂದದಿ
ತೋರಿಯಡಗುವ ದೇಹವೀ ಸಂ
ಸಾರ ಬಹಳಾರ್ಣವದೊಳಗೆ ಮುಳುಗಿದೆನು ಪತಿಕರಿಸಿ
ತೋರಿಸಚಲಾನಂದ ಪದವಿಯ
ಸೇರಿಸಕಟಾ ನಿನ್ನವೋಲ್ ನಮ
ಗಾರು ಬಾಂಧವರುಂಟು ರಕ್ಷಿಸು ನಮ್ಮನನವರತ || ೭೫ ||

ಹೊದ್ದಿ ನಿಲುವುದೆ ದರ್ಪಣವ ಮೇ
ಲುದ್ದುರುಳಿ ಬೀಳ್ವಂತೆ ನಿಮಿಷದಿ
ಬಿದ್ದುಹೋಗುವ ಕಾಯವೀ ತನುವೆಂಬ ಪಾಶದಲಿ
ಬದ್ಧನಾದೆನು ಮಮತೆಯಲಿ ನೀ
ನಿರ್ದಯದಕೆ ಫಲವೇನು ಭಕ್ತಿವಿ
ರುದ್ಧವಾಗದವೋಲು ರಕ್ಷಿಸು ನಮ್ಮನನವರತ || ೭೬ ||

ಕೇಳುವುದು ಕಡು ಕಷ್ಟ ಕಷ್ಟದ
ಬಾಳುವೆಯ ಬದುಕೇನು ಸುಡು ಸುಡು
ಗಾಳಿಗೊಡ್ಡಿದ ಸೊಡರು ಈ ಸಂಸಾರದೇಳಿಗೆಯು
ಬಾಳಬೇಕೆಂಬವಗೆ ನೆರೆ ನಿ
ನ್ನೋಲಗವ ಮಿಗೆ ಮಾಡಿ ಭಕ್ತಿಯೊ
ಳಾಳಿ ಬದುಕುವುದುಚಿತ ರಕ್ಷಿಸು ನಮ್ಮನನವರತ || ೭೭ ||

೭೫ ಸಂಸಾರ ಬಹಳಾರ್ಣವ=ಸಂಸಾರವೆಂಬ ವಿಶಾಲವಾದ ಸಮುದ್ರ. ಪತಿಕರಿಸಿ=ಕನಿಕರದಿಂದ ಕಂಡು. ಅಚಲಾನಂದ ಪದವಿ=ನಿರಂತರವಾದ ಆನಂದದ ಪದವಿ. ನಿನ್ನವೋಲ್=ನಿನ್ನಂತೆ.

೭೬ ಹೊದ್ದಿ ನಿಲುವುದೆ ದರ್ಪಣದ ಮೇಲುದ್ದುರುಳಿ ಬೀಳ್ವಂತೆ=ನುಣುಪಾದ ಕನ್ನಡಿಯನ್ನು ಉದ್ದ ಬಿಗಿಯಾಗಿ ಹಿಡಿದು ನಿಲ್ಲುವುದೇ? ಅದು ಬಿದ್ದುಹೋಗುವಂತೆ. ಬದ್ಧನಾದೆನು=ಕಟ್ಟಿಸಿಕೊಂಡಿದ್ದೇನೆ. ಮಮತೆಯಲಿ ನೀನಿರ್ದಯದಕೆ ಫಲವೇನು=ಭಕ್ತರನ್ನು ಪ್ರೀತಿಸುವ ನೀನು ನನ್ನನ್ನು ಬಿಡಿಸದಿದ್ದರೆ ಫಲವೇನು? ಭಕ್ತಿವಿರುದ್ಧವಾಗದವೋಲು=ಭಕ್ತಿಯಿಂದ ಫಲವಿಲ್ಲ ಎನ್ನುವಂತಾಗದೆ ಇರಲು (ಭಕ್ತರನ್ನು ನೀನು ಕಾಪಾಡುತ್ತಿ ಎಂಬುದನ್ನು ತೋರಿಸುವಂತೆ).

೭೭ ಕೇಳುವುದು ಕಡು ಕಷ್ಟ=ಒಬ್ಬರ ಸೇವೆ ಮಾಡಿಕೊಂಡು, ನನಗೆ ಇದನ್ನು ಕೊಡಿ ಎಂದು ಬೇಡುವುದು ಮನಸ್ಸಿಗೆ ಹಿಂಸೆ. ಗಾಳಿಗೊಡ್ಡಿದ ಸೊಡರು ಈ ಸಂಸಾರದೇಳಿಗೆಯು=ಈ ಸಂಸಾರ ಸುಖವು ಗಾಳಿಗೊಡ್ಡಿದ ದೀಪದಂತೆ, ಯಾವ ಕ್ಷಣವಾದರೂ ಮುಗಿದು ಹೋಗಬಹುದು. ನಿನ್ನೋಲಗವ ಮಿಗೆ ಮಾಡಿ=ನಿನ್ನ ಸೇವೆಯನ್ನು ಬಹುವಾಗಿ ಮಾಡಿ.

ದೇಹಧಾರಕನಾಗಿ ಬಹುವಿಧ
ಮೋಹದೇಳಿಗೆಯಾಗಿ ಮುಕುತಿಗೆ
ಬಾಹಿರನು ತಾನಾಗಿ ವಿಷಯಾದಿಗಳಿಗೊಳಗಾಗಿ
ದೇಹವೀ ಸಂಸಾರವೆನ್ನದೆ
ಮೋಹಿಸುವ ಮತಿಗೇಡಿ ಮಾನವ
ಸಾಹಸಿಯೆ ಸಟೆ ಮಾತು ರಕ್ಷಿಸು ನಮ್ಮನನವರತ || ೭೮ ||

ಅಳಿವ ಒಡಲನು ನೆಚ್ಚಿ ವಿಷಯಂ
ಗಳಿಗೆ ಕಾತರನಾಗಿ ಮಿಗೆ ಕಳ
ವಳಿಸಿ ಕಾಲನ ಬಳಿಗೆ ಹಂಗಿಗನಾಗಿ ಬಾಳುವರೆ
ತಿಳಿದು ಮನದೊಳು ನಿನ್ನ ನಾಮಾ
ವಳಿಯ ಜಿಹ್ವೆಗೆ ತಂದು ಪಾಪವ
ಕಳೆದ ಬದುಕೇ ಲೇಸು ರಕ್ಷಿಸು ನಮ್ಮನನವರತ ||೭೯ ||

ವರುಷ ನೂರಾಯುಷ್ಯವದರೊಳ
ಗಿರುಳು ಕಳೆದೈವತ್ತು ಐವ
ತ್ತರಲಿ ವಾರ್ಧಿಕ ಬಾಲ್ಯ ಕೌಮಾರದಲಿ ಮೂವತ್ತು
ಇರದೆ ಸಂದುದು ಬಳಿಕವಿಪ್ಪ
ತ್ತ್ವರುಷವದರೊಳಗಾದುದಂತಃ
ಕರಣ ನಿನ್ನೊಳು ತೋರಿ ರಕ್ಷಿಸು ನಮ್ಮನನವರತ || ೮೦ ||

ಊರು ತನಗೊಂದಿಲ್ಲ ಹೊತ್ತ ಶ
ರೀರಗಳ ಮಿತಿಯಿಲ್ಲ ತಾ ಸಂ
ಚಾರಿಸದ ಸ್ಥಳವಿಲ್ಲ ನುಡಿಯದ ಭಾಷೆ ಮತ್ತಿಲ್ಲ

೭೮ ದೇಹಧಾರಕನಾಗಿ=ದೇಹವು ಲಭ್ಯವಾಗಿರುವುದರಿಂದ. ಬಹುವಿಧ ಮೋಹದೇಳಿಗೆಯಾಗಿ=ಅನೇಕ ಬಗೆಯ ಮೋಹಗಳು ಬೆಳೆದು. ಮುಕುತಿಗೆ ಬಾಹಿರನು=ಮುಕ್ತಿಯಿಂದ ದೂರನಾಗುತ್ತಾನೆ. ವಿಷಯಾದಿಗಳಿಗೊಳಗಾಗಿ = ವಿಷಯಸುಖದಲ್ಲಿ ಸಿಕ್ಕಿ. ಈ ದೇಹವೀ ಸಂಸಾರವೆನ್ನದೆ=ಈ ದೇಹದಿಂದಲೇ ಸಂಸಾರ ಎಂದು ತಿಳಿದುಕೊಳ್ಳದೆ. ಮೋಹಿಸುವ ಮತಿಗೇಡಿ ಮಾನವ ಸಾಹಸಿಯೆ? ಸಟೆಮಾತು=ದೇಹವನ್ನೇ ಮೋಹಿಸುವ ಮನುಷ್ಯನು ಬುದ್ಧಿ ಕೆಟ್ಟವನು. ಇವನು ಸಾಹಸಿಯಲ್ಲ. ಸಾಹಸಿ ಎಂದರೆ ಸುಳ್ಳಾದೀತು.

೭೯ ಅಳಿವ=ನಾಶವಾಗುವ. ಕಾಲನ ಬಳಿಗೆ ಹಂಗಿಗನಾಗಿ=ಯಮನ ಹಂಗಿನಲ್ಲಿ ಬಿದ್ದು. ಜಿಹ್ವೆಗೆ=ನಾಲಿಗೆಗೆ.

೮೦ ವಾರ್ಧಿಕ=ಮುಪ್ಪು. ಸಂದುದು=ಉಳಿದದ್ದು.

ಬೇರೆ ಹೊಸತೊಂದಿಲ್ಲ ಉಣ್ಣದ
ಸಾರ ವಸ್ತುಗಳಿಲ್ಲ ತನುಸಂ
ಚಾರವೀ ಬಗೆಯಾಯ್ತು ರಕ್ಷಿಸು ನಮ್ಮನನವರತ ‖ ೮೧ ‖

ಗೋಪುರದ ಭಾರವನು ಗಾರೆಯ
ರೂಪುದೋರಿದ ಪ್ರತಿಮೆಯಂದದೊ
ಳೀಪರಿಯ ಸಂಸಾರಭಾರವನಾರು ತಾಳುವರು
ತಾ ಪರಾಕ್ರಮಿಯೆಂದು ಮನುಜನು
ಕಾಪಥವನಯ್ದುವನು ವಿಶ್ವ
ವ್ಯಾಪಕನು ನೀನಹುದು ರಕ್ಷಿಸು ನಮ್ಮನನವರತ ‖ ೮೨ ‖

ಬೀಜವೃಕ್ಷದೊಳಾಯ್ತು ವೃಕ್ಷಕೆ
ಬೀಜವ್ಯಾರಿಂದಾಯ್ತು ಲೋಕದಿ
ಬೀಜವೃಕ್ಷನ್ಯಾಯವಿದ ಭೇದಿಸುವರ್‍ಯಾರಿನ್ನು
ಸೋಜಿಗವ ನೀ ಬಲ್ಲೆ ನಿನ್ನೊಳು
ರಾಜಿಸುತ ಮೊಳೆದೋರುವುದು ಸುರ
ರಾಜನಂದನನಮಿತ ರಕ್ಷಿಸು ನಮ್ಮನನವರತ ‖ ೮೩ ‖

ತೊಗಲು ಬೊಂಬೆಗಳಂತೆ ನಾಲಕು
ಬಗೆಯ ನಿರ್ಮಾಣದಲಿ ಇದರೊಳು
ನೆಗಳದೀ ಚೌಪಷ್ಟಿ ಲಕ್ಷಣ ಜಾತಿ ಧರ್ಮದಲಿ

೮೧ ಊರು ತನಗೊಂದಿಲ್ಲ=(ಈವರೆಗೆ ತಾಳಿದ ಎಲ್ಲ ಜನ್ಮಗಳನ್ನು ಕುರಿತು ಯೋಚಿಸಿದರೆ) ತನ್ನದೇ ಎಂದು ಯಾವ ಊರೂ ಇಲ್ಲ. ತನುಸಂಚಾರವೀಬಗೆಯಾಯ್ತು=ದೇಹವನ್ನು ನಂಬಿ ನನ್ನ ಅಲೆದಾಟ ಹೀಗಾಯಿತು.

೮೨ ಗೋಪುರದ ಭಾರವನು ಗಾರೆಯ ರೂಪುದೋರಿದ ಪ್ರತಿಮೆಯಂದದೊಳು=ಗಾರೆಯಿಂದ ಮಾಡಿದ ಪ್ರತಿಮೆಯು ಗೋಪುರದ ಭಾರವನ್ನು (ಹೊರುವಂತೆ). ಕಾಪಥವನು= ತಪ್ಪುದಾರಿಯನ್ನು.

೮೩ ಬೀಜವೃಕ್ಷನ್ಯಾಯವಿದ ಭೇದಿಸುವರ್‍ಯಾರಿನ್ನು=ಮರವು ಮೊದಲು ಹುಟ್ಟಿತೋ ಬೀಜವು ಮೊದಲು ಹುಟ್ಟಿತೋ ಎನ್ನುವ ಪ್ರಶ್ನೆಗೆ ಯಾರು ಉತ್ತರ ಹೇಳಬಲ್ಲರು? ಸೋಜಿಗವ=ಈ ಚಮತ್ಕಾರವನ್ನು. ನಿನ್ನೊಳು ರಾಜಿಸುತ ಮೊಳೆದೋರುವುದು=ನಿನ್ನ ಸಂಕಲ್ಪದಿಂದ ಎಲ್ಲ ಲೀಲೆಯೂ ನಡೆಯುವುದು. ಸುರರಾಜನಂದನ ನಮಿತ= ದೇವೇಂದ್ರನ ಮಗ ಅರ್ಜುನನಿಂದ ನಮಸ್ಕಾರವನ್ನು ಪಡೆಯುವವನು.

ಬಗೆಬಗೆಯ ನಾಮಾಂಕಿತದ ಜೀ
ವಿಗಳದೆಲ್ಲವು ನಿನ್ನ ನಾಮದಿ
ಜಗದಿ ತೋರುತ್ತಿಹುದು ರಕ್ಷಿಸು ನಮ್ಮನನವರತ ॥ ೬೪ ॥

ಹೂಡಿದೆಲು ಮರಮುಟ್ಟು ಮಾಂಸದ
ಗೋಡೆ ಚರ್ಮದ ಕೊದಿಕೆ ನರವಿನ
ಕೂಡೆ ಹಿಂಡಿಗೆ ಬಿಗಿದ ಮನೆಯೊಳಗಾತ್ಮ ನೀನಿರಲು
ಬೀಡು ತೊಲಗಿದ ಬಳಿಕಲಾ ಸುಡು
ಗಾಡಿನಲಿ ಬೆಂದುರಿವ ಕೊಂಪೆಯ
ನೋಡಿ ನಂಬಿರಬಹುದೆ ರಕ್ಷಿಸು ನಮ್ಮನನವರತ ॥ ೬೫ ॥

ಬೀಗಮುದ್ರೆಗಳಿಲ್ಲದೂರಿಗೆ
ಬಾಗಿಲುಗಳೊಂಬತ್ತು ಹಗಲಿರು
ಳಾಗಿ ಮುಚ್ಚದೆ ತೆರೆದಿಹುದು ಜೀವಾತ್ಮ ತಾನಿರುತ
ನೀಗಿಯೆಲ್ಲವ ಬಿಸುಟು ಬೇಗದಿ
ಹೋಗುತಿಹ ಸಮಯದಲಿ ಇವರವ
ರಾಗಬಲ್ಲರೆ ನೀನೆ ರಕ್ಷಿಸು ನಮ್ಮನನವರತ ॥ ೬೬ ॥

೬೪ ನಾಲಕು ಬಗೆಯ ನಿರ್ಮಾಣದಲಿ: ಜೀವಿಗಳು ನಾಲ್ಕು ರೀತಿಗಳಲ್ಲಿ ಹುಟ್ಟುತ್ತಾರೆ. ಜರಾಯುಜ (ಮನುಷ್ಯರ ಹಾಗೆ ತಾಯಿಯ ಗರ್ಭದಿಂದ ಹೊರಕ್ಕೆ ಬರುವುದು). ಅಂಡಜ (ಪಕ್ಷಿಗಳಂತೆ ಮೊಟ್ಟೆಯಿಂದ ಬರುವುದು). ಸ್ವೇದಜ (ಹೇನಿನಂತೆ ಬೆವರಿನಿಂದ ಹುಟ್ಟುವುದು) ಮತ್ತು ಉದ್ಭಿಜ್ಜ (ಸಸ್ಯಗಳಂತೆ ಹುಟ್ಟುವುದು). ಚೌಷಷ್ಟಿ=ಅರವತ್ತ ನಾಲ್ಕು (ನಾಲ್ಕು ರೀತಿಗಳಲ್ಲಿ ಹುಟ್ಟುವ ಪ್ರಾಣಿಗಳು ಅರವತ್ತನಾಲ್ಕು, ಎಂದರೆ ಅನೇಕಾನೇಕ ರೀತಿಗಳ, ಒಳಭೇದಗಳಿಂದ, ತೊಗಲುಬೊಂಬೆಗಳ ಹಾಗೆ ಆಡುತ್ತವೆ) ಜೀವಗಳದೆಲ್ಲವು ನಿನ್ನ ನಾಮದಿ ಜಗದಿ ತೋರುತ್ತಿಹುದು=ಈ ಜೀವಿಗಳಿಗೆಲ್ಲ ನೀನೇ ಹೆಸರು ಕೊಟ್ಟವನು, ನೀನು ಆಡಿಸಿದಂತೆ ಆಡುತ್ತವೆ.

೬೫ ಹೂಡಿದೆಲು ಮರಮುಟ್ಟು =(ಈ ಶರೀರವೆಂಬ ಮನೆಗೆ) ಎಲುಬುಗಳೇ ಮರದ ಸಾಮಾನು. ನರವಿನ ಕೂಡೆ ಹಿಂಡಿಗೆ ಬಿಗಿದ=ನರಗಳಿಂದ ಒಟ್ಟಾಗಿ ಬಿಗಿದ. ಬೀಡು ತೊಲಗಿದ ಬಳಿಕ=(ನೀನಿರುವವರೆಗೆ ಇದು ಮನೆ) ನೀನು ಬಿಟ್ಟು ಹೋದ ಮೇಲೆ.

೬೬ ಬೀಗಮುದ್ರೆಗಳಿಲ್ಲದೂರು=ಈ ದೇಹವೆಂಬ ಊರಿಗೆ ಬೀಗಮುದ್ರೆಗಳಿಲ್ಲ. ಒಂಬತ್ತು ಬಾಗಿಲುಗಳು=ಕಣ್ಣುಗಳು, ಕಿವಿಗಳು ಮೊದಲಾಗಿ ಒಂಬತ್ತು ದ್ವಾರಗಳು. ನೀಗಿಯೆಲ್ಲವ ಬಿಸುಟು=ಜೀವಾತ್ಮನು ಇದೆಲ್ಲವನ್ನು ಬಿಟ್ಟು ಹೋಗುವಾಗ. ಇವರವರಾಗಬಲ್ಲರೆ=ಇವರು, ಅವರು (ಯಾರೇ ಆಗಲಿ) ನೆರವಾಗಬಲ್ಲರೆ?

ಕೀಲು ಬಲಿದಿಹುದೈದು ತಿರುಗುವ
ಗಾಲಿಯೆರಡರ ರಥದಿ ತ್ರೈಗುಣ
ಶೀಲನೋರ್ವನು ಸಂಚರಿಸುತಿಹನಾ ರಥಾಗ್ರದಲಿ
ಕೀಲು ಕಡೆಗೊಂಡೂಡಿ ಬೀಳಲು
ಕಾಲಗತಿ ತಪ್ಪುವುದು ಅದರನು
ಕೂಲ ನಿನ್ನೊಳಗಿಹುದು ರಕ್ಷಿಸು ನಮ್ಮನನವರತ ॥ ೮೭ ॥

ಬಿಗಿದ ರಕುತದ ರೋಮಕೂಪದ
ತೊಗಲ ಕೋಟೆಯ ನಂಬಿ ರೋಗಾ
ದಿಗಳ ಮುತ್ತಿಗೆ ಬಲಿದು ಜೀವನ ಪಿಡಿಯಲನುವಾಯ್ತು
ವಿಗಡ ಯಮನಾಳುಗಳು ಬರುತಿರೆ
ತೆಗೆಸು ಕಾಲನ ಬಲವ ಬಲು ಮು
ತ್ತಿಗೆಯನಿದ ಪರಿಹರಿಸಿ ರಕ್ಷಿಸು ನಮ್ಮನನವರತ ॥ ೮೮ ॥

ವಾರಣಗಳೆಂಟಿಸೆವ ಮನೆಗೆ
ದ್ವಾರವೊಂಬತ್ತದಕೆ ಬಲು ಮೊನೆ
ಗಾರರಾದಾಳುಗಳ ಕಾವಲುಗಾರರನು ಮಾಡಿ
ಆರರಿಯದಂತದರೊಳಗೆ ಹೃದ
ಯಾರವಿಂದದಿ ನೀನಿರಲು ಬರಿ
ದೂರು ಜೀವನಿಗುಂಟೆ ರಕ್ಷಿಸು ನಮ್ಮನನವರತ ॥ ೮೯ ॥

೮೭ (ಈ ಪದ್ಯದಲ್ಲಿ ಶರೀರವನ್ನು ರಥಕ್ಕೆ ಹೋಲಿಸಿದೆ.) ಕೀಲಿ ಬಲಿದಿಹುದೈದು=ಐದು ಕೀಲುಗಳಿವೆ (ಇವು ಪಂಚಭೂತಗಳಾಗಬಹುದು, ಪಂಚೇಂದ್ರಿಯಗಳಾಗಬಹುದು.) ಗಾಲಿಗಳೆರಡು=ಜ್ಞಾನ ಕರ್ಮ ಗಾಲಿಗಳು (ಎರಡು ಕಾಲುಗಳನ್ನು ಗಾಲಿಗಳಿಗೆ ಹೋಲಿಸಿರಬಹುದು.) ತ್ರೈಗುಣಶೀಲನೋರ್ವನು=ಸತ್ತ್ವ, ರಜಸ್ಸು, ತಮಸ್ಸು ಈ ಮೂರು ಗುಣಗಳುಳ್ಳ ಜೀವನು. ಕೀಲು ಕಡೆಗೊಂಡೂಡಿ ಬೀಳಲು ಕಾಲಗತಿ ತಪ್ಪುವುದು=ಒಂದು ಕೀಲು ತಪ್ಪಿದರೂ ರಥವು ಸಂಚರಿಸಲಾರದು. ಅದರನುಕೂಲ ನಿನ್ನೊಳಗಿಹುದು=ಈ ರಥವನ್ನು ಸರಿಯಾಗಿ ನಡೆಸುವ ಶಕ್ತಿ ನಿನ್ನಲ್ಲಿದೆ. (ನೀನು ಅವಕಾಶ ಕೊಡುವಷ್ಟು ಕಾಲ ದೇಹ ಚಲಿಸುತ್ತಿರುತ್ತದೆ.)

೮೮ ಕೋಟೆಯ ನಂಬಿ=ರಕ್ತ, ಕೂದಲು, ಚರ್ಮ ಇವುಗಳಿಂದಾದ ದೇಹವನ್ನು ಕೋಟೆಯೆಂದು ಭ್ರಮಿಸಿ. ಜೀವನ ಪಿಡಿಯಲುನುವಾಯ್ತು=ಜೀವವನ್ನು ಹಿಡಿದುಕೊಂಡು ಹೋಗಲು ಸಿದ್ಧತೆಯಾಯಿತು. ವಿಗಡ=ಪರಾಕ್ರಮಿಗಳು (ಕ್ರೂರಿಗಳು).

೮೯ ವಾರಣಗಳೆಂಟು=ಎಂಟು ಆನೆಗಳು (ಪಂಚಭೂತಗಳು, ಮನಸ್ಸು, ಬುದ್ಧಿ, ಅಹಂಕಾರ) ಮನೆಗೆ=ಮನುಷ್ಯನ ಶರೀರಕ್ಕೆ. ದ್ವಾರವೊಂಬತ್ತು=ಕಣ್ಣುಗಳು, ಕಿವಿಗಳು ಮೊದಲಾಗಿ ಒಂಬತ್ತು ಬಾಗಿಲುಗಳು. ಬಲು ಮೊನೆಗಾರರಾದಾಳುಗಳ ಕಾವಲುಗಾರರನು ಮಾಡಿ=ಬಹಳ ಎಚ್ಚರದಿಂದಿರುವ (ಕಣ್ಣು, ಕಿವಿ ಮೊದಲಾದ) ಪರಾಕ್ರಮಿಗಳಾದ ಪಂಚೇಂದ್ರಿಯಗಳನ್ನು ಕಾವಲುಗಾರರನ್ನಾಗಿ ನೇಮಿಸಿ. ಹೃದಯಾರವಿಂದದಿ=ಹೃದಯವೆಂಬ ಕಮಲದಲ್ಲಿ. ಬರಿದೂರು ಜೀವನಿಗಂಟೆ=(ನೀನು ದೇಹದಲ್ಲಿ ವಾಸಿಸುವಾಗ) ಜೀವನು ತಾನಾಗಿ ಏನನ್ನೂ ಮಾಡಲಾರ, ಅವನನ್ನು ವೃಥಾ ದೂರಬಹುದೇ?

ಪೇಳಲೆನ್ನಳವಲ್ಲವೀಗೆಮ
ಸಾಳುಗಳು ನೆರೆಯಂಗದೇಶವ
ಥಾಳಿ ಮಾಡುವರಕಟಕಟ ಸೆರೆಸೂರೆಗಳ ಪಿಡಿದು
ಕಾಳು ಮಾಡುವರಿನ್ನು ತನುವಿದು
ಬಾಳಲರಿಯದು ಕೋಟೆಯುವರಿಗೆ
ಕೋಳುಹೋಗದ ಮುನ್ನ ರಕ್ಷಿಸು ನಮ್ಮನನವರತ || ೯೦ ||

ನಾಲಿಗೆಯು ನಾಸಿಕವು ನಯನ ಕ
ಪಾಲ ಪದ ಪಾಣಿಗಳು ತನುವಿನ
ಮೂಲಕರ್ತೃವಿನಲ್ಲಿ ಪರಿಚಾರಕರು ತಾವಾಗಿ
ಲೀಲೆಯಿಂದಿರುತಿರ್ದು ಕಡೆಯಲಿ
ಕಾಲ ತೀರಿದ ಬಳಿಕಲದರನು
ಕೂಲ ನಿನ್ನೊಳಗಹುದು ರಕ್ಷಿಸು ನಮ್ಮನನವರತ || ೯೧ ||

ಸತ್ತವರಿಗಳಲೇಕೆ ತನ್ನನು
ಹೊತ್ತವರು ಪೆತ್ತವರುಗಳು ತಾ
ಸತ್ತು ಹೋಗುವರಲ್ಲದುಳಿವರೆ ಮರುಗಲೇಕಿನ್ನು
ಮೃತ್ಯು ಬೆನ್ನಿನೊಳಿಹುದು ತಾವಿ
ನ್ನತ್ತು ಮಾಡುವುದೇನು ಪೂರ್ವದ
ತೆತ್ತಿಗನು ನೀನೀಗ ರಕ್ಷಿಸು ನಮ್ಮನನವರತ || ೯೨ ||

೯೦ ಅಳವಲ್ಲ=ಸಾಮರ್ಥ್ಯವಿಲ್ಲ. ಅಂಗದೇಶವ=ಅಂಗಗಳಿರುವ ಈ ದೇಹದ ಮೇಲೆ ನೆರೆಸೂರೆಗಳ ಪಿಡಿದು ಕಾಳು ಮಾಡುವರಿನ್ನು=(ಯಮನ ಆಳುಗಳು) ಕೈಗೆ ಸಿಕ್ಕಿದುದನ್ನು ಸೂರೆ ಮಾಡುವರು. ಕೋಳುಹೋಗದ ಮುನ್ನ=ಎಲ್ಲವೂ ನಾಶವಾಗಿ ಹೋಗುವುದಕ್ಕೆ ಮೊದಲು.

೯೧ ನಾಸಿಕ=ಮೂಗು ನಯನ=ಕಣ್ಣು ಪದ–ಕಾಲು. ಪಾಣಿಗಳು=ಕೈಗಳು. ತನುವಿನ ಮೂಲಕರ್ತೃವಿನಲ್ಲಿ ಪರಿಚಾರಕರು ತಾವಾಗಿ=(ಇವೆಲ್ಲ ಇಂದ್ರಿಯಗಳೂ ಅಂಗಗಳೂ) ಈ ದೇಹವನ್ನು ಸೃಷ್ಟಿಸಿದ ನಿನ್ನ ಪರಿಚಾರಕರಾಗಿ. ಅದರನುಕೂಲ ನಿನ್ನೊಳಗಹುದು=ಅವುಗಳಿಂದ ಹೇಗೆ ಸೇವೆಯನ್ನು ತೆಗೆದುಕೊಳ್ಳಬೇಕೆಂದು ತೀರ್ಮಾನಿಸುವವನು ನೀನು.

೯೨ ಸತ್ತುಹೋಗುವರಲ್ಲದುಳಿವರೆ ?=ಸತ್ತು ಹೋಗುವರು, ಉಳಿಯುತ್ತಾರೆಯೆ ? ಪೂರ್ವದ ತೆತ್ತಿಗನು=(ಮೃತ್ಯುವು) ಹಿಂದೆ ಸಾಲವನ್ನು ಕೊಟ್ಟಿರುವವನು. (ಅವನ ಸಾಲವನ್ನು ತೀರಿಸಲೇ ಬೇಕು).

ಮಣ್ಣು ಮಣ್ಣಿನೊಳುದಿಸಲದರಲಿ
ಮಣ್ಣು ಬೊಂಬೆಗಳಾಗಿ ರಂಜಿಸಿ
ಮಣ್ಣಿನಾಹಾರದಲಿ ಜೀವವ ಹೊರೆದು ಉಪಚರಿಸಿ
ಮಣ್ಣಿನಲಿ ಬಂಧಿಸಿದ ದೇಹವ
ಮಣ್ಣುಗೂಡಿಸಬೇಡ ಜ್ಞಾನದ
ಕಣ್ಣ ದೃಷ್ಟಿಯನಿಟ್ಟು ರಕ್ಷಿಸು ನಮ್ಮನನವರತ ‖ ೯೩ ‖

ಬೀಯವಾಗುವ ತನುವಿನಲಿ ನಿ
ರ್ದಾಯಕನು ನೀನಿರ್ದು ಅತಿ ಹಿರಿ
ದಾಯಸಂಬಡಿಸುವರೆ ನೀನನುಕೂಲವಾಗಿರ್ದು
ತಾಯನಗಲಿದ ಶಿಶುವಿನಂದದಿ
ಬಾಯಿಬಿಡುವಂತಾಯ್ತು ಚಿಂತಾ
ದಾಯಕನೆ ಬಿಡಬೇಡ ರಕ್ಷಿಸು ನಮ್ಮನನವರತ ‖ ೯೪ ‖

ಮೊದಲುಜನನವನರಿಯೆ ಮರಣದ
ಹದನ ಕಡೆಯಲಿ ತಿಳಿಯೆ ನಾ ಮ
ಧ್ಯದಲಿ ನೆರೆ ನಾ ನಿಪುಣನೆಂಬುದು ಬಳಿಕ ನಗೆಗೇಡು
ಮೊದಲು ಕಡೆ ಮಧ್ಯಗಳ ಬಲ್ಲವ
ಮದನ ಜನಕನು ನೀನು ನಿನ್ನಯ
ಪದಯುಗವ ಬಯಸುವೆನು ರಕ್ಷಿಸು ನಮ್ಮನನವರತ ‖ ೯೫ ‖

೯೩ ಮಣ್ಣು ಮಣ್ಣಿನೊಳುದಿಸಲು=ಮಣ್ಣಿನ ದೇಹದಿಂದ ಈ ಮಣ್ಣಿನ ಶರೀರ ಹುಟ್ಟಿದೆ. ಮಣ್ಣಿನಾಹಾರದಲಿ ಜೀವವ ಹೊರೆದು=ಮಣ್ಣಿನ ದೇಹಕ್ಕೆ ಮಣ್ಣಿನ ಆಹಾರವನ್ನು ಕೊಟ್ಟು ಬೆಳೆಸಿದೆ. ದೇಹವ ಮಣ್ಣುಗೂಡಿಸಬೇಡ=ಮಣ್ಣಿನ ದೇಹ ವ್ಯರ್ಥವಾಗಿ ಮಣ್ಣಿಗೆ ಸೇರಿಹೋಗುವಂತೆ ಮಾಡಬೇಡ. ಜ್ಞಾನದ ಕಣ್ಣ ದೃಷ್ಟಿಯನಿಟ್ಟು=ಜ್ಞಾನದ ಕಣ್ಣನ್ನು ಕೊಟ್ಟು ಬದುಕನ್ನು ಸಾರ್ಥಕಮಾಡು.

೯೪ ಬೀಯವಾಗುವ=ಬಿದ್ದು ನಾಶವಾಗುವ. ನಿರ್ದಾಯಕನು=ಸಂಪೂರ್ಣನಾದವನು, ಅವಿನಾಶಿಯಾದವನು. ಅತಿ ಹಿರಿದಾಯಸಂಬಡಿಸುವರೆ?=ವಿಪರೀತ ಆಯಾಸವನ್ನು ಕೊಡಬಹುದೆ? ಚಿಂತಾದಾಯಕನೆ=ಈ ಚಿಂತೆಗಳನ್ನು ನೀನೇ ಕೊಡುವೆಯು?

೯೫ ಹದನ=ಸರಿ, ರೀತಿ. ಮಧ್ಯದಲಿ ನೆರೆ ನಾ ನಿಪುಣನೆಂಬುದು=ಹುಟ್ಟು ಸಾವುಗಳನ್ನು ಅರ್ಥಮಾಡಿಕೊಳ್ಳಲಾರದ ನಾನು ಅವುಗಳ ಮಧ್ಯದ ಜೀವನವನ್ನು ಚೆನ್ನಾಗಿ ಅರ್ಥಮಾಡಿಕೊಂಡಿದ್ದೇನೆ ಎನ್ನುವುದು. ಮದನ ಜನಕನು=ಮನ್ಮಥನ ತಂದೆ.

ಸಾರವಿಲ್ಲದ ದೇಹವಿದು ನಿ
ಸ್ಸಾರವಾಗಿಹ ತನುವಿನಲಿ ಸಂ
ಚಾರಿಯಹ ನೀನಿರ್ದು ಕಡೆಯಲಿ ತೊಲಗಿ ಹೋಗುತಲಿ
ದೂರ ತಪ್ಪಿಸಿಕೊಂಡು ಬರಿಯಪ
ದೂರ ಹೊರಿಸಿದೆ ಜೀವನಲಿ ಇದ
ನಾರು ಮೆಚ್ಚುವರಕಟ ರಕ್ಷಿಸು ನಮ್ಮನನವರತ ॥ ೯೬ ॥

ಅಂಡವೆರಡುದ್ಭವಿಸಿದವು ಬ್ರ
ಹ್ಮಾಂಡವದರೋಪಾದಿಯಲಿ ಪಿಂ
ಡಾಂಡವೆಸೆದುದು ಸ್ಥೂಲ ಕಾರಣ ಸೂಕ್ಷ್ಮತನುವಿನಲಿ
ಅಂಡ ನಿನ್ನಯ ರೋಮಕೂಪದೊ
ಳಂಡಲೆದವಖಿಳಾಂಡವಿದು ಬ್ರ
ಹ್ಮಾಂಡನಾಯಕ ನೀನು ರಕ್ಷಿಸು ನಮ್ಮನನವರತ ॥ ೯೭ ॥

ಒಂದು ದಿನ ತನುವಿನಲಿ ನಡೆವುದು
ಇಂದು ಭಾಸ್ಕರ ಸ್ವರಗಳಿಪ್ಪ
ತ್ತೊಂದು ಸಾವಿರದಾರುನೂರನು ಏಳು ಭಾಗದಲಿ
ಬಂದುದನು ಉಡುಚಕ್ರದಲ್ಲಿಗೆ
ತಂದು ಧಾರೆಯನೆರೆದ ಮುನಿಕುಲ
ವೃಂದಹೃದಯನು ನೀನು ರಕ್ಷಿಸು ನಮ್ಮನನವರತ ॥ ೯೮ ॥

೯೬ ಬರಿಯಪದೂರ ಹೊರಿಸಿದೆ ಜೀವನಲಿ=ನೀನು ದೇಹದಲ್ಲಿದ್ದು ಕಡೆಗೆ ದೂರ ಹೋಗಿ ಬಿಟ್ಟು ಎಲ್ಲ ದೂರನ್ನೂ ಜೀವನ ಮೇಲೆ ಹೊರಿಸಿಬಿಡುವೆ !

೯೭ ಅಂಡವೆರಡು=ಬ್ರಹ್ಮಾಂಡ, ಪಿಂಡಾಂಡ ಎಂಬ ಎರಡು ಲೋಕಗಳು (ಭಗವಂತನಿಂದ ಹುಟ್ಟಿದವು). ಅದರೋಪಾದಿಯಲಿ=ಅದರ ಹಾಗೆಯೇ. ಪಿಂಡಾಂಡನೆಸೆದುದು ಸ್ಥೂಲ ಕಾರಣ ಸೂಕ್ಷ್ಮ ತನುವಿನಲಿ=ಈ ದೇಹವೇ ಪಿಂಡಾಂಡ. ಇದರಲ್ಲಿ ಸ್ಥೂಲ ದೇಹ (ಹೊರಕ್ಕೆ ಕಾಣಿಸುವ ಸ್ಥೂಲವಾದ ದೇಹ), ಸೂಕ್ಷ್ಮ ದೇಹ (ಜ್ಞಾನೇಂದ್ರಿಯ ಪಂಚೇಂದ್ರಿಯ, ಪಂಚವಾಯುಗಳು ಮತ್ತು ಅಂತಃಕರಣ) ಮತ್ತು ಕಾರಣದೇಹ (ಅಜ್ಞಾನ) ಈ ಮೂರು ಭೇದಗಳಾದವು. ಅಂಡ ನಿನ್ನಯ ರೋಮಕೂಪದೊಳಂಡಲೆದವು ಲೋಕಗಳು=ನಿನ್ನ ಒಂದೊಂದು ಕೂದಲಿನಲ್ಲಿಯೂ ಇಂತಹ ಎಷ್ಟು ಲೋಕಗಳು ಅಂಡಲೆದವೊ ! ಬ್ರಹ್ಮಾಂಡ ನಾಯಕ=ಸಮಸ್ತ ವಿಶ್ವಕ್ಕೆ ನೀನೇ ನಾಯಕ.

೯೮ ಈ ಪದ್ಯದಲ್ಲಿ ಯೋಗಿಗಳ ಹೃದಯದಲ್ಲಿರುವ ಭಗವಂತನು ರಕ್ಷಿಸಬೇಕೆಂದು ಕನಕದಾಸರು ಪ್ರಾರ್ಥಿಸುತ್ತಿದ್ದಾರೆ. ಒಂದು ದಿನದಲ್ಲಿ ಸೂರ್ಯನಾಡಿ ಚಂದ್ರನಾಡಿಗಳ ಮೂಲಕ ಇಪ್ಪತ್ತೊಂದು ಸಾವಿರದ ಆರುನೂರು ಉಸಿರಾಟಗಳಾಗುತ್ತವೆ. ಏಳು

ತೊಲಗುವರು ಕಡೆಕಡೆಗೆ ತಾ ಹೊಲೆ
ಹೊಲೆಯೆನುತ ಕಳವಳಿಸಿ ಮೂತ್ರದ
ಬಿಲದೊಳಗೆ ಬಂದಿಹುದ ಕಾಣದೆ ಬರಿದೆ ಮನನೊಂದು
ಜಲದೊಳಗೆ ಮುಳುಗಿದರೆ ತೊಲಗದು
ಹೊಲೆಗೆಲಸವೀ ದೇಹದೊಳು ನೀ
ನೆಲಸಿರಲು ಹೊಲೆಯುಂಟೆ ರಕ್ಷಿಸು ನಮ್ಮನನವರತ ॥ ೯೯ ॥

ಬರಿದಹಂಕಾರದಲಿ ತತ್ತ್ವದ
ಕುರುಹ ಕಾಣದೆ ನಿನ್ನ ದಾಸರ
ಜರಿದು ವೇದ ಪುರಾಣ ಶಾಸ್ತ್ರಗಳೋದಿ ಫಲವೇನು
ನರರು ದುಷ್ಕರ್ಮದಲಿ ಮಾಡಿದ
ದುರಿತವಡಗಲು ನಿನ್ನ ನಾಮ
ಸ್ಮರಣೆಯೊಂದೇ ಸಾಕು ರಕ್ಷಿಸು ನಮ್ಮನನವರತ ॥ ೧೦೦ ॥

ಎಂಜಲೆಂಜಲು ಎಂಬರಾ ನುಡಿ
ಎಂಜಲಲ್ಲವೆ ವಾರಿ ಜಲಚರ
ದೆಂಜಲಲ್ಲವೆ ಹಾಲು ಕರುವಿನೆಂಜಲೆನಿಸಿರದೆ

ಚಕ್ರಗಳು ಮೂಲಾಧಾರ, ಸ್ವಾಧಿಷ್ಠಾನ, ಮಣಿಪೂರ, ಅನಾಹತ, ವಿಶುದ್ಧಿ, ಆಜ್ಞಾ, ಸಹಸ್ರಾರ. ಆಜ್ಞಾ ಚಕ್ರವು ತಾರಕಸ್ಥಾನದಲ್ಲಿದೆ. ಉಡು ಎಂದರೆ ತಾರಕ, ನಕ್ಷತ್ರ. ಆದ್ದರಿಂದ 'ಉಡುಚಕ್ರ' ಎಂದಿರುವುದು ಆಜ್ಞಾ ಚಕ್ರ ಎಂದು ವಿದ್ವಾಂಸರು ಊಹಿಸುತ್ತಾರೆ. ಇಪ್ಪತ್ತೊಂದು ಸಾವಿರದ ಆರುನೂರು ಉಸಿರಾಟಗಳನ್ನು ಉಡುಚಕ್ರದಲ್ಲಿ ಧಾರೆ ಎರೆಯುವ ಯಾವ ಯೋಗಿಗಳಿದ್ದಾರೋ ಅವರ ಹೃದಯಗಳಲ್ಲಿ ನೀನು (ಭಗವಂತ) ನೆಲಸಿದ್ದೀಯೆ. ಅಂತಹ ನೀನು ನಮ್ಮನ್ನು ಕಾಪಾಡು.
(ಪ್ರಾಣಾಯಾಮದ ಸಾಧನೆಯ ಕೆಲವು ಪ್ರಕ್ರಿಯೆಗಳನ್ನು ಕನಕದಾಸರು ಇಲ್ಲಿ ಸೂಚಿಸಿದ್ದಾರೆ.)

೯೯ ಕಡೆಕಡೆಗೆ= ದೂರದೂರಕ್ಕೆ. ಕಳವಳಿಸಿ=ಕಳವಳದಿಂದ, ಮೈಲಿಗೆಯಾಯಿತೆಂಬ ಆತಂಕದಿಂದ. ಈ ದೇಹದೊಳು ನೀ ನೆಲೆಸಿರಲು ಹೊಲೆಯುಂಟೆ ? = ಈ ಶರೀರದಲ್ಲಿ ನೀನು ನೆಲೆಸಿರುವಾಗ ಅದು ಕೊಳಕು, ಹೊಲೆ ಆದೀತೆ ?

೧೦೦ ತತ್ತ್ವದ ಕುರುಹ ಕಾಣದೆ=ಸತ್ಯದ, ಪರಾತ್ಪರ ವಸ್ತುವಿನ ಸುಳಿವನ್ನೂ ತಿಳಿಯದೆ. ದುರಿತ=ಪಾಪ (ಬರಿಯ ಪಾಂಡಿತ್ಯದಿಂದ ಪಾಪವು ಹೋಗುವುದಿಲ್ಲ. ಭಕ್ತಿಯಿಂದ ಭಗವಂತನ ನಾಮಸ್ಮರಣೆ ಮಾಡುವುದು ಮುಖ್ಯ)



೯

ಎಂಜಲೆಲ್ಲಿಯದೆಲ್ಲಿಯುಂ ಪರ
ರೆಂಜಲಲ್ಲದೆ ಬೇರೆ ಭಾವಿಸ
ಲೆಂಜಲುಂಟೇ ದೇವ ರಕ್ಷಿಸು ನಮ್ಮನನವರತ || ೧೦೧ ||

ಕೇಳುವುದು ಹರಿಕಥೆಯ ಕೇಳಲು
ಹೇಳುವುದು ಹರಿಭಕ್ತಿ ಮನದಲಿ
ತಾಳುವುದು ಹಿರಿದಾಗಿ ನಿನ್ನಯ ಚರಣಸೇವೆಯಲಿ
ಊಳಿಗವ ಮಾಡುವುದು ವಿಷಯವ
ಹೂಳುವುದು ನಿಜ ಮುಕ್ತಿಕಾಂತೆಯ
ನಾಳುವುದು ಕೃಪೆ ಮಾಡಿ ರಕ್ಷಿಸು ನಮ್ಮನನವರತ || ೧೦೨ ||

ಈ ತೆರದೊಳಚ್ಯುತನ ನಾಮವ
ನೂತನದಿ ವಸುಧಾತಳದಿ ವಿ
ಖ್ಯಾತಿ ಬಯಸದೆ ಬಣ್ಣಿಸಿದೆ ಭಾಮಿನಿಯ ವೃತ್ತದಲಿ
ನೀತಿಕೋವಿದರಾಲಿಸುವರತಿ
ಪ್ರೀತಿಯಲಿ ಕೇಳ್ದರಿಗೆಯಸುರಾ
ರಾತಿ ಚೆನ್ನಿಗರಾಯ ಸುಖಗಳನೀವನನವರತ || ೧೦೩ ||

ಬಾದರಾಯಣ ಪೇಳ್ದ ಭಾರತ
ಕಾದಿಕರ್ತನುದಾರ ಶ್ರೀಪುರ
ದಾದಿಕೇಶವಮೂರ್ತಿಗಂಕಿತವಾದ ಚರಿತೆಯನು
ಮೇದಿನಿಯೊಳಿದನಾರು ಹೃದಯದೊ
ಳಾದರಿಸಿ ಕೇಳ್ದಪರು ಮುದದಲಿ
ಯಾದಿಮೂರುತಿ ವರಪುರಾಧಿಪನೊಲಿವನನವರತ || ೧೦೪ ||

೧೦೧ ವಾರಿ ಜಲಚರದೆಂಜಲಲ್ಲವೆ=ನೀರು ಜಲದಲ್ಲಿ ವಾಸಿಸುವ ಪ್ರಾಣಿಗಳ ಎಂಜಲಲ್ಲವೆ? ಅದೆಲ್ಲಿಯುಂ ಪರರೆಂಜಲ್ಲದೆ ಬೇರೆ ಭಾವಿಸಲೆಂಜಲುಂಟೆ? = ಯೋಚಿಸಿ ನೋಡಿದರೆ ಎಂಜಲಲ್ಲದ್ದು ಯಾವುದಾದರೂ ಉಂಟೆ? ನಮಗೆಂದೇ ಸೃಷ್ಟಿಯಾದದ್ದು ಯಾವುದೂ ಇಲ್ಲ.

೧೦೨ ವಿಷಯವ ಹೂಳುವುದು=ವಿಷಯಾಸಕ್ತಿಯನ್ನು ಸಂಪೂರ್ಣವಾಗಿ ಬಿಡಬೇಕು. ನಿಜ ಮುಕ್ತಿಕಾಂತೆಯನಾಳುವುದು=ಹೀಗೆ ನಡೆದುಕೊಂಡರೆ ಮೋಕ್ಷವು ಕೈವಶವಾಗುವುದು.

೧೦೩ ೧೦೩ನೆಯ ಪದ್ಯದಿಂದ ಕನಕದಾಸರು 'ಹರಿಭಕ್ತಸಾರ'ವನ್ನು ಕೇಳಿದವರಿಗೆ ಆಗುವ ಶುಭವನ್ನು ವಿವರಿಸುತ್ತಾರೆ. ಇದು ಫಲಶ್ರುತಿ.
ಭಾಮಿನಿಯ ವೃತ್ತದಲಿ=ಭಾಮಿನೀ ಷಟ್ಪದಿಯಲ್ಲಿ. ಅಸುರಾರಾತಿ=ರಾಕ್ಷಸರ ಶತ್ರು.

೧೦೪ ಬಾದರಾಯಣ=ವ್ಯಾಸರು. ಭಾರತಕಾದಿಕರ್ತ (ವ್ಯಾಸರು ಹೇಳಿದ) ಭಾರತದ ಕಥೆಗೆ ಮೂಲಕರ್ತೃವಾದ ಶ್ರೀಕೃಷ್ಣ. ಮೇದಿನಿ=ಭೂಮಿ.

ಕುಲಗಿರಿಗಳನ್ವಯುವ ಧಾರಿಣಿ
ಜಲಧಿ ಪಾವಕ ಮರುತ ಜಲ ನಭ
ಜಲಜಸಖ ಶೀತಾಂಶು ತಾರೆಗಳುಳ್ಳ ಪರಿಯಂತ
ಚಲನೆಯಿಲ್ಲದ ನಿನ್ನ ಚರಿತೆಯು
ಒಲಿದು ಧರೆಯೊಳಗೊಪ್ಪುವಂದದಿ
ಚೆಲುವ ಚನ್ನಿಗರಾಯ ರಕ್ಷಿಸು ನಮ್ಮನನವರತ ॥ ೧೦೫ ॥

ನೂರು ಕನ್ಯಾದಾನವನು ಭಾ
ಗೀರಥೀಸ್ನಾನವನು ಮಿಗೆ ಕೈ
ಯಾರೆ ಗೋವ್ಗಳ ಪ್ರೇಮದಿಂದಲಿ ಭೂಸುರರಿಗೊಲಿದು
ಊರುಗಳ ನೂರಗ್ರಾಹಾರವ
ಧಾರೆಯೆರೆದಿತ್ತಂತೆ ಫಲ ಕೈ
ಸೇರುವುದು ಹರಿಭಕ್ತಿಸಾರದ ಕಥೆಯ ಕೇಳ್ದವಗೆ ॥ ೧೦೬ ॥

ಮೇರು ಮಂದರ ನಿಭಸುವರ್ಣವ
ವಾರಿಮಧ್ಯದೊಳಿರುವ ಅವನಿಯ
ನಾರಿಯರ ಗಾಯತ್ರಿ ಪಶುಗಳನಿತ್ತ ಫಲವಹುದು
ಧಾರಿಣಿಯೊಳೀ ಭಕ್ತಿಸಾರವ
ನಾರು ಓದುವರವರಿಗನುದಿನ
ಚಾರು ವರಗಳನಿತ್ತು ರಕ್ಷಿಪನಾದಿಕೇಶವನು ॥ ೧೦೭ ॥

೧೦೫ ಕುಲಗಿರಿಗಳನ್ವಯುವ=ಏಳು ಕುಲಪರ್ವತಗಳು ಇರುವವರೆಗೂ (ಕುಲಪರ್ವತಗಳು ಮಹೇಂದ್ರ, ಮಲಯ, ಶಕ್ತಿಮಾನ್, ಋಕ್ಷ, ಸಹ್ಯ, ವಿಂಧ್ಯ ಮತ್ತು ಪಾರಿಯಾತ್ರ.) ಧಾರಿಣಿ=ಭೂಮಿ. ಜಲಧಿ=ಸಮುದ್ರ. ಪಾವಕ=ಅಗ್ನಿ. ಮರುತ=ವಾಯು. ಜಲ=ನೀರು. ನಭ=ಆಕಾಶ. ಜಲಜಸಖ=ಸೂರ್ಯ. ಶೀತಾಂಶು=ಚಂದ್ರ. ತಾರೆ=ನಕ್ಷತ್ರ. ಚಲನೆಯಿಲ್ಲದ=ಶಾಶ್ವತವಾದ. ಧರೆಯೊಳಗೊಪ್ಪುವಂದದಿ=ಭೂಲೋಕದಲ್ಲಿ ಬೆಳಗುವಂತೆ.

೧೦೬ ಭಾಗೀರಥೀ ಸ್ನಾನವನು=ಗಂಗಾಸ್ನಾನವನ್ನು.

೧೦೭ ಮೇರುಮಂದರನಿಭಸುವರ್ಣವ=ಮೇರುಪರ್ವತ, ಮಂದರಪರ್ವತಗಳಷ್ಟು ಚಿನ್ನವನ್ನೂ, ವಾರಿಮಧ್ಯದೊಳಿರುವ=ಸಮುದ್ರಪರ್ಯಂತವಾದ. ಅವನಿ=ಭೂಮಿ. ನಾರಿಯರ=ಕನ್ನೆಯರನ್ನು. ಗಾಯತ್ರಿ ಪಶುಗಳನಿತ್ತ=ಗಾಯತ್ರಿಯನ್ನು ಉಪದೇಶಿಸಿದರೆ, ಹಸುಗಳನ್ನು ದಾನಕೊಟ್ಟರೆ ಬರುವ. ಚಾರು=ಒಳ್ಳೆಯ, ಶುಭಕರವಾದ.

ಲೋಕದೊಳಗತ್ಯಧಿಕನೆನಿಸುವ
ಕಾಕಿನೆಲೆ ಸಿರಿಯಾದಿಕೇಶವ
ತಾ ಕೃಪೆಯೊಳಗೆ ನುಡಿಸಿದನು ಈ ಭಕ್ತಿಸಾರವನು
ಜೋಕೆಯಲಿ ಬರೆದೋದಿ ಕೇಳ್ದರ
ನಾಕುಲದಿ ಮಾಧವನು ಕರುಣಿಪ
ಶ್ರೀ ಕಮಲವಲ್ಲಭನು ಮಿಗೆ ಬಿಡದಾದಿಕೇಶವನು ‖ ೧೦೮ ‖

## ಮಂಗಳ

ಮಂಗಳಂ ಸರ್ವಾದಿಭೂತಗೆ
ಮಂಗಳಂ ಸರ್ವವನು ಪೊರೆವಗೆ
ಮಂಗಳಂ ತನ್ನೊಳಗೆ ಲೋಕವ ಲಯಿಸಿಕೊಂಬವಗೆ
ಮಂಗಳಂ ಸರ್ವಸ್ವತಂತ್ರಗೆ
ಮಂಗಳಂ ಸಿರಿಗೊಡೆಯ ಚೆನ್ನಿಗರಾಯ ಕೇಶವಗೆ ‖ ೧ ‖

ಮಂಗಳಂ ಜಗದಾದಿಮೂರ್ತಿಗೆ
ಮಂಗಳಂ ಶ್ರಿತಪುಣ್ಯಕೀರ್ತಿಗೆ
ಮಂಗಳಂ ಕರಕಲಿತಚಕ್ರವಿದಳಿತನಕ್ರನಿಗೆ
ಮಂಗಳಂ ದ್ರೌಪದಿಯ ಪೊರೆದಗೆ
ಮಂಗಳಂ ಧ್ರುವರಾಜಗೊಲಿದಗೆ
ಮಂಗಳಂ ಬೇಲೂರ ಚೆನ್ನಿಗರಾಯ ಕೇಶವಗೆ ‖ ೨ ‖

೧೦೮ ನುಡಿಸಿದನು=ಹೇಳಿಸಿದನು (ಸ್ಫೂರ್ತಿ ಕೊಟ್ಟು, ಇದರ ರಚನೆಯನ್ನು ಮಾಡಿಸಿದನು). ಜೋಕೆಯಲಿ=ಎಚ್ಚರದಿಂದ

ಮುಂದಿನ ಮೂರು ಪದ್ಯಗಳು ಮಂಗಳ ಪದ್ಯಗಳು.

೧ ಸರ್ವಾದಿಭೂತಗೆ=ಎಲ್ಲ ವಸ್ತುಗಳಿಗೂ ಮೂಲವಾದವನು. ತನ್ನೊಳಗೆ ಲೋಕವ ಲಯಿಸಿಕೊಂಬವಗೆ=ಲೋಕವನ್ನು ತನ್ನಲ್ಲಿ ಐಕ್ಯಮಾಡಿಕೊಳ್ಳುವವನಿಗೆ. ಸಿರಿಗೊಡೆಯ= ಲಕ್ಷ್ಮೀದೇವಿಯ ಪತಿಯಾದವನು.

೨ ಶ್ರಿತಪುಣ್ಯಕೀರ್ತಿಗೆ=ಮಂಗಳಕರವಾದ ಕೀರ್ತಿಯನ್ನು (ಪರಿಶುದ್ಧನೆಂಬ ಕೀರ್ತಿಯನ್ನು) ಪಡೆದವನಿಗೆ. ಕರಕಲಿತಚಕ್ರವಿದಳಿತನಕ್ರನಿಗೆ=ತನ್ನ ಕೈಯಲ್ಲಿರುವ ಚಕ್ರದಿಂದ ಮೊಸಳೆ ಕತ್ತರಿಸಿದವನಿಗೆ. (ಮೊಸಳೆಯನ್ನು ಕೊಂದು ವಿಷ್ಣುವು ಗಜೇಂದ್ರನನ್ನು ರಕ್ಷಿಸಿದ).

ಜಯ ಸುರೇಂದ್ರವರಾರ್ಚಿತಾಂಘ್ರಿಯೆ
ಜಯ ಪುರಾಧಿಪಸಂಸ್ತುತಾತ್ಮನೆ
ಜಯ ಮಹಾ ಮುನಿಯೋಗಗಮ್ಯನೆ ಮೇಘಮೇಚಕನೆ
ಜಯ ಜನಕಜೆಮುಖಾಬ್ಜಮಿತ್ರನೆ
ಜಯ ಕಲಾಧಿಪಸೂರ್ಯನೇತ್ರನೆ
ಜಯ ಜಯ ಜಗನ್ನಾಥ ದೇವನೆ ಚೆನ್ನ ಕೇಶವನೆ ‖ ೩ ‖

೩ ಸುರೇಂದ್ರವರಾರ್ಚಿತಾಂಘ್ರಿಯೆ=ಇಂದ್ರನಿಂದ ಪೂಜಿಸಲ್ಪಡುವ ಚರಣಗಳುಳ್ಳವನೆ. ಪುರಾಧಿಪಸಂಸ್ತುತಾತ್ಮನೆ=ಈಶ್ವರನಿಂದ ಸ್ತುತಿಸಲ್ಪಟ್ಟವನೆ. ಮಹಾಮುನಿಯೋಗಗಮ್ಯನೆ=ಮಹಾಮುನಿಗಳ ಯೋಗ ಸಾಧನೆಗೆ ನಿಲುಕುವಂತಹವನು. ಮೇಘಮೇಚಕ=ಮೇಘದಂತೆ ನೀಲಿ ಬಣ್ಣದವನು. ಜನಕಜೆಮುಖಾಬ್ಜಮಿತ್ರನೆ=ಸೀತಾದೇವಿಯ ಕಮಲದಂತಹ ಮುಖಕ್ಕೆ ಸೂರ್ಯನಾದವನೆ. ಕಲಾಧಿಪಸೂರ್ಯನೇತ್ರನೆ=ಚಂದ್ರ ಸೂರ್ಯರನ್ನು ಹೋಲುವ ಕಣ್ಣುಳ್ಳವನೆ.

# ರಾಮಧಾನ್ಯ ಚರಿತ್ರೆ

ಶ್ರೀ ರಮಾಪತಿ ಸಿಂಧುಶಯನ ಮು
ರಾರಿ ಮುನಿಕುಲ ಪೂಜಿತಾಂಘ್ರಿ ಸ
ರೋರುಹಾಕ್ಷ ಸುದರ್ಶನಾಂಕಿತ ದೇವ ಭವದೂರ
ಮಾರಪಿತ ಕೌಸಲಾದೇವಿ ಕು
ಮಾರ ರಘುಕುಲ ರಾಮನೃಪ ವರ
ಪೌರ ಚನ್ನಿಗರಾಯ ಪಾಲಿಸು ಸಕಲ ಸಜ್ಜನರ ॥ ೧ ॥

ಗಿರಿಜೆಯರಸನ ಭಜಿಸಿ ಲಕ್ಷ್ಮೀ
ವರನ ಪಾದಾಂಬುಜಕೆ ವಂದಿಸಿ
ಕರಿಮುಖನ ಬಲಗೊಂಡು ಗೀರ್ವಾಣಿಗೆ ನಮಸ್ಕರಿಸಿ
ಗುರುವಿನಂಘ್ರಿಗೆ ನಮಿಸಿ ಸತ್ಕವಿ
ವರರ ಮನದಲಿ ನೆನೆದು ವರಪುರ
ದರಸನನು ಕೊಂಡಾಡಿ ಪೇಳುವೆನೀ ಮಹಾಕಥೆಯ ॥ ೨ ॥

ರಾಮಧಾನ್ಯದ ಕೃತಿಯನೀ ಜನ
ಸ್ತೋಮವೆಲ್ಲಾದರಿಸುವಂದದಿ
ಭೂಮಿಗಚ್ಚರಿಯಾಗಿ ಪೇಳುವೆನೀ ಮಹಾಕಥೆಯ
ಪ್ರೇಮದಿಂದಾದರಿಸಿ ಕೇಳ್ದ ಸ
ನಾಮರಿಗೆ ಸತ್ಕರುಣದಲಿ ರಘು
ರಾಮ ಪಾಲಿಸಿಕೊಡುವ ಮನದಲಿ ಇಷ್ಟಸಂಪದವ ॥ ೩ ॥

ಧರೆಯನೆಲ್ಲವ ಸೋತು ಜೂಜಲಿ
ಕುರುಪತಿಗೆ ಕೈದಳಿಸಿ ತಮ್ಮಂ
ದಿರು ಸಹಿತ ಧರ್ಮಜನು ಕಾಮ್ಯಕ ವನದೊಳಿರುತಿರಲು

ರಮಾ=ಲಕ್ಷ್ಮಿ. ಪತಿ=ವಿಷ್ಣು. ಸಿಂಧು=ಸಮುದ್ರ. ಶಯನ=ಹಾಸುಗೆಯಾಗುಳ್ಳವನು. ಭವದೂರ=ಸಂಸಾರ ದೂರ. ಮಾರಪಿತ=ವಿಷ್ಣು. ಕರಿಮುಖ=ಗಣಪತಿ. ಬಲಗೊಂಡು=ಪ್ರದಕ್ಷಿಣೆ ಮಾಡಿ. ಗೀರ್ವಾಣಿ=ಸರಸ್ವತಿ. ರಾಮಧಾನ್ಯ=ರಾಗಿ. ಕೈದಳಿಸು=ವಶಪಡಿಸು.

ಪರಮಋಷಿ ಶಾಂಡಿಲ್ಯ ಮುನಿ ಸ
ತ್ಕರುಣದಲಿ ನಡೆತಂದನಲ್ಲಿಗೆ
ವರ ತಪೋಧನರೊಡನೆ ಕಾಣಿಸಿಕೊಂಡನುಚಿತದಲಿ ||೪||

ಧರಣಿಪತಿ ಯಮಸೂನು ತಮ್ಮಂ
ದಿರು ಸಹಿತಲಿದಿರೆದ್ದು ಮುನಿಪನ
ಚರಣಕಾನತನಾಗಿ ಕೈ ಮುಗಿದಿರಲು ಧರ್ಮಜನ
ಕರೆದು ಲಾಲಿಸಿ ಕುಳ್ಳಿರಿಸಿ ಸ
ತ್ಕರುಣದಲಿ ಮುನಿ ನುಡಿದನೆಲೆ ನೃಪ
ಸಿರಿ ದರಿದ್ರತೆ ನಿಲದು ಪರಿಹರವಹುದು ಕೇಳೆಂದ ||೫||

ದೇವ ಋಷಿಗಳು ನಿಮ್ಮ ಕರುಣಾ
ಭಾವವೆಮ್ಮಲ್ಲಿರಲು ನಮಗಿ
ನ್ನಾವ ಕಷ್ಟದ ಬಳಕೆದೋರದು ನಿಮ್ಮ ದರುಶನದಿ
ಪಾವನರು ನಾವಾದೆವೆಮಗಿ
ನ್ನಾವ ಬುದ್ಧಿಯನರುಹುವಿರಿಯದ
ನೀವು ಪೇಳೆನೆ ನಸುನಗುತ ಮುನಿನಾಥನಿಂತೆಂದ ||೬||

ಧಾರುಣಿಯೊಳರಸುಗಳು ನಾಲ್ವರು
ಭೂರಿ ಸತ್ಯವ್ರತರು ನಳನೃಪ
ಧೀರ ರಾಮ ಯುಧಿಷ್ಠರ ಹರಿಶ್ಚಂದ್ರರಿವರೆಂದು
ದೂರುತಿದೆ ಜಗವೆಲ್ಲ ನಿಮ್ಮನು
ದಾರನಿದರೊಳು ರಘುಪತಿಯು ಗುಣ
ಹಾರ ಧರ್ಮವ ಪಾಲಿಸಿದ ನರೆದಲೆಗ ವ್ರಿಹಿಯರಿಗೆ ||೭||

ಎನಲು ರಾಮಚರಿತ್ರೆಯನು ನೀ
ವೆನಗೆ ಪೇಳಿದಡಾಲಿಸುವೆನೆನೆ
ಮನದೊಳಗೆ ತಾ ನಸುನಗುತ ಶಾಂಡಿಲ್ಯನು ಯುಧಿಷ್ಠಿರಗೆ

ಯಮಸೂನು=ಧರ್ಮರಾಯ, ಆನತನಾಗಿ=ತಲೆಬಾಗಿ. ಪಾವನರು=ಪವಿತ್ರರು. ಭೂರಿ= ಶ್ರೇಷ್ಠ. ನರೆದಲೆಗ=ರಾಗಿ. ವ್ರಿಹಿ=ಬತ್ತ.

ಅನುನಯದೊಳಾದರಿಸಿ ರಘುನಂ
ದನನ ಚರಿತೆಯನರುಹಿ ಭೂಪನ
ಮನಸಿನಲ್ಲಿರುವಂತೆ ವಿಸ್ತರಿಸಿದ ಮಹಾಕಥೆಯ ॥ ೮ ॥

ಕೇಳು ಕುಂತೀತನಯ ಗಂಗಾ
ಕೂಲದುತ್ತರ ಭಾಗದಲಿ ವಿ
ಶಾಲ ವಿಭವದೊಳೆಸೆವಯೋಧ್ಯಾನಗರವಾ ಪುರವ
ಪಾಲಿಸುವ ದಿನಕರ ಕುಲಾನ್ವಯ
ಶೀಲ ದಶರಥನಾ ಮಹೀಲೋ
ಲಲೋಚನೆ ಕೌಸಲ್ಯ ದೇವಿಯ ಸೀಮೆ ಸ್ಥಳದಲ್ಲಿ (?) ॥ ೯ ॥

ದಶರಥಗೆ ಕೌಸಲೆಗೆ ಜನಿಸಿದ
ರಸಿಕ ಗುಣನಿಧಿ ರಾಮನೃಪನಾ
ಅಸುರೆ ತಾಟಕಿಯೊರಸಿ ಮಾರೀಚನ ಸುಬಾಹುವನು
ಕುಸುರಿದರಿದಾ ಮುನಿಮುಖವ ರ
ಕ್ಷಿಸಿಯಹಲ್ಯಾಶಾಪವನು ಖಂಡ್ರಿಸಿ
ನಿಜಾನುಜ ಮುನಿಪ ಸಹಿತಾ ಮಿಥಿಳೆಗೈದಿದನು ॥ ೧೦ ॥

ಹರನ ಧನುವೇರಿಸಿದ ಸೀತೆಯ
ವರಮುಹೂರ್ತದಿ ವರಿಸಿ ತಮ್ಮಂ
ದಿರು ನಿಜಾಂಗನೆ ಸಹಿತ ಮಿಥಿಳಾಪುರವ ಹೊರವಂಟ
ಬರುತ ಮಾರ್ಗಾಂತರದಿ ಕಂಡನು
ಪರಶುರಾಮನ ಗೆಲಿದಯೋಧ್ಯಾ
ಪುರವ ಹೊಕ್ಕನು ರಾಜತೇಜದಿ ಸುರರು ನಲಿದಾಡೆ ॥ ೧೧ ॥

ಕೇಳು ಧರ್ಮಜ ನಿಮ್ಮಪೋಲ್ ವಿಪಿ
ನಾಲಯದ ಸಿರಿ ಸಂಭವಿಸೆ ಜನ
ಪಾಲ ರಾಮನು ಪಿತೃ ವಚನ ಪಾಲನೆಯ ನೇಮದಲಿ

ಅನುನಯ=ಪ್ರೇಮ, ಸ್ನೇಹ. ಕೂಲ=ದಡ. ದಿನಕರ ಕುಲಾನ್ವಯ=ಸೂರ್ಯವಂಶದವನು. ಅಸುರೆ=ರಾಕ್ಷಸಿ. ಕುಸುರಿದರಿ=ಚೂರುಚೂರಾಗಿ ಕತ್ತರಿಸು. ಮುನಿಮುಖ=ವಿಶ್ವಾಮಿತ್ರನ ಯಜ್ಞ. ಅಹಲ್ಯಾಶಾಪ=ಇಂದ್ರನ ದೆಸೆಯಿಂದಾಗಿ, ಕಲ್ಲಾಗೆಂದು ಪತಿಯಿಂದ ಪಡೆದ ಶಾಪ. ವಿಪಿನಾಲಯ=ಕಾಡಿನಮನೆ,

ಬಾಲಕಿಯನೊಡಗೊಂಡು ಸತ್ಯವ
ಪಾಲಿಸುತ ಲಕ್ಷ್ಮಣನ ಕೂಡೆ ನಿ
ಜಾಲಯುವ ಹೊರವಂಟುಹೊಕ್ಕನು ಘೋರ ಕಾನನವ ॥ ೧೨ ॥

ಭರತನನು ಸಂತೈಸಿ ಕಾಕಾ
ಸುರನ ಪ್ರಾಣವ ಕಾಯ್ದು ದಾನವ
ತರುಣಿ ನಾಸಿಕವರಿದು ಮಾಯಾಮೃಗವ ಸಂಹರಿಸಿ
ಸರಸಿಜಾಕ್ಷಿಯನಗಲಿ ಮಾರ್ಗಾಂ
ತರದಿ ಕಂಡ ಜಟಾಯುವನು ಮನ
ಮರುಗಿ ವೃತ್ತಾಂತವನು ತಿಳಿದವನಲ್ಲಿ ಗತಿಗೊಳಿಸಿ ॥ ೧೩ ॥

ಅಲ್ಲಿ ಶೋಕೋದ್ರೇಕದಲಿ ಕರ
ಪಲ್ಲವದ ಕದಪಿನಲಿ ಊರ್ಮಿಳೆ
ವಲ್ಲಭನನೊಡಗೊಂಡು ಕಿಷ್ಕಿಂಧಾದ್ರಿಗೈತಂದು
ಅಲ್ಲಿ ಸಂಭಾಷಿಸಿದ ರವಿಸುತ
ನಲ್ಲಿ ವಾಲಿಯ ಮಡುಹಿ ವಾನರ
ರೆಲ್ಲರನು ಕೈಕೊಂಡು ನಡೆದನು ಮುಂದೆ ದಕ್ಷಿಣಕೆ ॥ ೧೪ ॥

ಮಾರುಥಿಯ ಬಂಧಿಸಿದ ಸೇನಾ
ಭಾರದಲಿ ನಡೆತಂದು ಲಂಕೆಯ
ಸೇರಿ ಮುತ್ತಿಗೆವಿಡಿದು ರಾವಣ ಕುಂಭಕರ್ಣರನು
ಭೂರಿಬಾಣದೊಳೊರಸಿ ದಾನವ
ವೀರರನು ಪರಿಹರಿಸಿ ರಘುನೃಪ
ವಾರಣನು ಪಟ್ಟವನು ಕಟ್ಟಿದನಾ ವಿಭೀಷಣಗೆ ॥ ೧೫ ॥

ಧರಣಿಸುತೆಯನು ಕರೆಸಿ ದೇವಾ
ಸುರರುಲಿಯಲು ವಿಭೀಷಣಗೆ ವಿ
ಸ್ತರಿಸಿ ಪೇಳಿದ ಪುರಕೆ ಪಯಣವಮಾಡು ನೀನೆನಲು

ಅರಣ್ಯವಾಸದ ಕಾಲದಲ್ಲಿ ಸೀತೆಯನ್ನು ಮೋಹಿಸಿ, ರಾಮನ ಕೋಪಕ್ಕೆ ಗುರಿಯಾದ ರಾಕ್ಷಸ ಕಾಕಾಸುರ. ದಾನವ ತರುಣಿ=ಶೂರ್ಪನಖಿ. ನಾಸಿಕ ಪರಿದು=ಮೂಗು ಕತ್ತರಿಸಿ. ಮಾಯಾಮೃಗ=ಕಾಂಚನ ಮೃಗ. ಗತಿಗೊಳಿಸಿ=ಸಂಸ್ಕಾರ ಮಾಡಿ. ಕರಪಲ್ಲವ=ಕೈಯೆಂಬ ಚಿಗುರು. ಊರ್ಮಿಳೆ ವಲ್ಲಭ=ಲಕ್ಷ್ಮಣ. ವಾರಣ=ಆನೆ.

ಕರೆಸಿದನು ನಿಜಮಂತ್ರಿ ಕರಿರಥ
ತುರುಗ ಪಾಯ್ದಳವಾಕ್ಷಣವೆ
ನೆರೆದುದಗಣಿತ ವೀರದಾನವ ಸೇನೆ ನಿಮಿಷದಲಿ || ೧೬ ||

ಹರುಷದಲಿ ತರಿಸಿದ ಕುಬೇರನ
ವರ ರಥವ ಮೇಳೈಸಿ ದೇವರ
ಸಿರಿಪದಾಂಬುಜಕರ್ಪಿಸಲು ಶ್ರೀರಾಮ ನಸುನಗುತ
ಕರೆಸಿ ಲಕ್ಷ್ಮಣದೇವನನು ನಿಜ
ತರುಣಿ ಸಹಿತೇರಿದ ವರೂಥವ
ತರಣಿಸುತ ಹನುಮಂತ ಜಾಂಬವರೈದಿತೊಗ್ಗಿನಲಿ || ೧೭ ||

ಅಂಗದನು ನಳನೀಲ ಶತಬಲಿ
ತುಂಗ ವಿಕ್ರಮ ಸುಷೇಣನಾ ಪ್ಲ
ವಂಗ ಗವಯ ಗವಾಕ್ಷ ಮೊದಲಾದಖಿಳ ವಾನರರು
ಸಂಗಡಿಸಿ ನೆರೆದುದು ಮಹಾಸಮ
ರಂಗವೀರರು ಮೋಹಿಸಿದ ರಘು
ಪುಂಗವನ ರಥದೊಡನೆ ನಡೆದುದು ಮುಂದೆ ಸಂದಣಿಸಿ || ೧೮ ||

ಧಾರುಣೀಪತಿ ಕೇಳು ಲಂಕೆಯ
ವೀರದಾನವ ಭಟರು ಪುರಜನ
ಪೌರಜನ ಸಹಿತಾ ವಿಭೀಷಣನೊಡನೆ ಮೇಳೈಸಿ
ಭೂರಿಬಲವೈತರುತಲಿರೆ ರಣ
ಭೇರಿ ದಂಧಣಧಣರೆನಲು ಮಿಗೆ
ಚೀರಿದವು ಕಹಳೆಗಳು ದಿಕ್ಪಾಲಕರ ಬೆದರಿಸಿತು || ೧೯ ||

ತಡೆಯದೈತಂದುಭಯಬಲ ಸಂ
ಗಡಿಸಿ ಬರುತಿರೆ ಮುಂದೆ ಸೇತುವ
ಮಡಿದಿಗೆಲ್ಲವ ತೋರಿಸುತ ನೆರೆ ಕಡಲ ದಾಂಟಿದರು
ನಡೆದು ರಾಮೇಶ್ವರದ ಬಳಿಯಲಿ
ಮೃಡನ ಪೂಜಿಸಿ ಭಕ್ತಿಭಾವದ
ಸಡಗರದಿ ವಾಲ್ಮೀಕಿಯಾಶ್ರಮಕೈದಿದನು ನೃಪತಿ || ೨೦ ||

ಕರಿ = ಆನೆ. ತುರಗ = ಕುದುರೆ. ಪಾಯ್ದಳ = ಕಾಲ್ದಳ. ಮೇಳೈಸಿ = ಅಣಿಗೊಳಿಸಿ. ವರೂಥ=ರಥ. ತರಣಿಸುತ = ಸೂರ್ಯನ ಮಗ ಸುಗ್ರೀವ. ಒಗ್ಗಿನಲಿ = ಒಟ್ಟಾಗಿ. ಮೋಹಿಸು=ಸೇರು, ಜೋಡಿಸು, ದಿಕ್ಪಾಲಕ=ವಾಯು, ಕುಬೇರ ಮೊದಲಾದ ದಿಗ್ದೇವತೆಗಳು. ಮೃಡ=ಈಶ್ವರ.

ಅಲ್ಲಿ ನೆರೆದ ಮಹಾಮುನೀಶ್ವರ
ರೆಲ್ಲರನು ಸತ್ಕರಿಸಿ ಜಾನಕಿ
ವಲ್ಲಭನು ನಡೆತಂದನಾ ಮುಚುಕುಂದನಾಶ್ರಮಕೆ
ಸಡಿಲದುನ್ನತ ಬಲಸಮೇತದಿ
ಕಡಲ ಕಂಡನು ಪಂಚನದಿಯೊಳ್
ಬಿಡದೆ ಪಲ್ಲೈಸಿರುವ ಫಲ ವಸ್ತುಗಳ ಸಂಭ್ರಮದಿ || ೨೧ ||

ಆ ಮಹಾವನದೊಳಗೆ ಸುಭಟ
ಸ್ತೋಮವಿಳಿದುದು ಪಾಳೆಯದ ಸಂ
ಗ್ರಾಮದಿದಿರಲಿ ಗುಡಿಗುಡಾರಂಗಳು ವಿರಾಜಿಸಿತು
ರಾಮಣೀಯಕ ರಚನೆಯಲಿ ಸು
ತ್ರಾಮನೋಲಗದಂತೆ ರಘುಕುಲ
ರಾಮನೈದಿರೆ ಬಂದು ಕಂಡರು ಸಕಲ ಮುನಿವರರು || ೨೨ ||

ಕೌಶಿಕನು ಜಮದಗ್ನಿ ಜನ್ಹು ಪ
ರಾಶರನು ಜಾಬಾಲಿ ಭೃಗು ದೂ
ರ್ವಾಸ ಗೌತಮನಾದಿಯಾದ ಸಮಸ್ತ ಮುನಿವರರು
ಭಾಸುರದ ತೇಜದಲಿ ತಮ್ಮಾ ನಿ
ವೇಶನವ ಹೊರವಂಟು ಬಂದರು
ದಾಶರಥಿಯನು ಕಂಡು ಹರಸಿದರಕ್ಷತೆಯ ತಳಿದು || ೨೩ ||

ರಾಮ ದಶರಥ ತನಯ ರಘುಕುಲ
ಸೋಮ ಸನ್ನೃತ ಸನಾಮನಾಹವ
ಭೀಮ ಸುಜನ ಪ್ರೇಮ ಜಗದಭಿರಾಮ ನಿಸ್ಸೀಮ
ತಾಮರಸದಳ ನಯನ ದೇವ
ಪ್ರೇಮ ಸುರಕುಲ ಮೌಳಿವಂದಿತ
ಪ್ರೇಮದಿಂದಲಿ ಪಾಲಿಸೆನ್ನು ತಲವರು ಪೊಗಳಿದರು || ೨೪ ||

ಭಿನ್ನಪ್ರಾಸವನ್ನು ನೋಡಿದರೆ ಈ ಪದ್ಯದ ಪೂರ್ವಾರ್ಧ ಉತ್ತರಾರ್ಧಗಳು ಬೇರೆ ಬೇರೆ ಪದ್ಯಗಳ ಭಾಗಗಳಿರಬೇಕೆಂದು ತೋರುತ್ತದೆ.

ಮುಚುಕುಂದ=ಈ ಹೆಸರಿನ ಋಷಿ. ಪಲ್ಲೈಸು=ತುಂಬಿರುವ, ಕೋರೈಸುವ. ಸ್ತೋಮ= ಸಮೂಹ. ಸಂಗ್ರಾಮ=ಯುದ್ಧ (?) ರಾಮಣೀಯಕ = ಮನೋಹರವಾದ. ಸುತ್ರಾಮ=ಇಂದ್ರ. ಭಾಸುರ=ಪ್ರಕಾಶಮಾನವಾದ. ಸನ್ನೃತ=ಸತ್ಯಪಾಲಕ. ಅಹವ= ಯುದ್ಧ. ತಾಮರಸದಳ=ಕಮಲದಳ. ಮೌಳಿ=ಕಿರೀಟ.

ದೇವಿ ಜಾನಕಿಸಹಿತ ವನದಲಿ
ನೀವು ಕಷ್ಟವ ಬಳಸಿ ಭಕ್ತರ
ಕಾವ ಹದನನು ನೆನೆದು ವಾನರ ಬಲಸಮೇತದಲಿ
ರಾವಣನ ಸಂಹರಿಸಿ ಲಂಕೆಯ
ನಾ ವಿಭೀಷಣಗಿತ್ತು ನಮ್ಮನು
ದೇವ ಪಾಲಿಸೆ ಬಂದೆಯೆಂದುಪಚರಿಸಿದರು ನೃಪನ || ೨೫ ||

ಸಾರಹೃದಯರು ನೀವು ನಮಗುಪ
ಚಾರವೇಕಿದು ನಿಮ್ಮಡಿಯ ಕರು
ಣಾರಸವೆ ಸಲಹುವುದು ನಮ್ಮನು ಸಾಕದಂತಿರಲಿ
ಆರಿಗುಂಟಿದು ನಿಮ್ಮ ದರುಶನ
ಸೇರಿತೆಮಗಿಂದಿನಲಿ ಯೆಂದುಪ
ಚಾರದಿಂ ಸತ್ಕರಿಸಿ ಕುಳ್ಳಿರಿಸಿದನು ಮುನಿವರರ || ೨೬ ||

ಎಡದ ಕಡೆಯಲಿ ಕಪಿಕುಲೇಂದ್ರನ
ಗಡಣ ಬಲದಲಿ ರಾವಣಾನುಜ
ಸಡಗರದಿ ಮುನಿನಿಕರವಿದಿರಲಿ ಹಿಂದೆ ವಾನರರು
ಮಡದಿ ಲಕ್ಷ್ಮಣ ದೇವರಿರ್ವರು
ಬಿಡದೆ ಚಿಮ್ಮಲು ಚಾಮರಂಗಳ
ಪೊಡವಿಪತಿ ಶ್ರೀರಾಮ ಸಿಂಹಾಸನದಿ ರಂಜಿಸಿದ || ೨೭ ||

ಅಲ್ಲಿ ನೆರೆದ ಮಹಾಮುನೀಶ್ವರ
ರೆಲ್ಲ ತರಿಸಿದರಖಿಳ ವಸ್ತುವ
ಬೆಲ್ಲ ಸಕ್ಕರೆ ಜೇನುತುಪ್ಪ ರಸಾಯನಂಗಳಲಿ
ಘುಲ್ಲವಿಸಿ ರಚಿಸಿದ ಸುಭಕ್ಷ್ಯಗ
ಳೆಲ್ಲವನು ತುಂಬಿದರು ಹೆಡಗೆಗ
ಳಲ್ಲಿ ಜೋಡಿಸಿ ಹೊರಿಸಿ ತಂದರು ರಾಮನೋಲಗಕೆ || ೨೮ ||

ತಂದು ಶಿಷ್ಯರು ಭಕ್ಷ್ಯಗಳ ಮುದ
ದಿಂದ ಸುರಿಯಲು ನೋಡಿ ನಸುನಗೆ
ಯಿಂದ ರಘುಕುಲಸಾರ್ವಭೌಮನು ಕರಸಿ ನಿಜಬಲಕೆ

ಹದ=ಉಪಾಯ. ಕಪಿಕುಲೇಂದ್ರ=ಸುಗ್ರೀವ. ರಾವಣಾನುಜ=ವಿಭೀಷಣ. ಘುಲ್ಲವಿಸಿ=ಸಂತೋಷದಿಂದ ಉಬ್ಬಿ.

ಅಂದು ಕೊಡಿಸಲು ನೋಡಿದರು ರುಚಿ
ಯಿಂದ ಸವಿದರು ಭೋಜ್ಯಗಳನಾ
ನಂದದಲಿ ಕೊಂಡಾಡಿದರು ವಾನರರು ಮುನಿವರರ || ೨೯ ||

ಅನಿಲಸುತ ಬಾರೆಂದು ರಘುನಂ
ದನನು ಕರುಣದೊಳಿವರ ರುಚಿಯೆಂ
ತೆನಲು ಕರಗಳ ಮುಗಿದು ಬಿನ್ನೈಸಿದನು ರಘುಪತಿಗೆ
ಇನಕುಲಾನ್ವಯತಿಲಕ ಚಿತ್ತೈ
ಸೆನಗೆ ಸವಿಯಹುದಿನ್ನು ಧಾನ್ಯದ
ತನುವನೀಕ್ಷಿಸಬೇಕು ದೇವರು ತರಿಸಿ ನೀವೆಂದ || ೩೦ ||

ಎನಲು ರಾಮನೃಪಾಲ ಗೌತಮ
ಮುನಿಯನೀಕ್ಷಿಸಬೇಕು ಸಲೆ ತರಿ
ಸೆನಲು ಧಾನ್ಯವನೊಡನೆ ಯಾಲೋಚಿಸಿದರೀ ಹದನ
ಮನನಲಿದು ತಂ ತಮ್ಮ ಶಿಷ್ಯರ
ವಿನಯದಿಂದಲಿ ಕರೆಸಿ ತಾರೆಂ
ದೆನಲು ಮೆರೆದರು ತಳುವದವರನು ತಂದು ಸಭೆಯೊಳಗೆ || ೩೧ ||

ನರೆದಲೆಗನಿದು ನೆಲ್ಲು ಹಾರಕ
ಬರಗು ಜೋಳವು ಕಂಬು ಸಾಮೆಯು
ಉರುತರದ ನವಣೆಯಿದು ನವಧಾನ್ಯವೆಂದೆನಲು
ಮೆರೆವ ರಾಶಿಯ ಕಂಡುಯಿದರೊಳು
ಪರಮಸಾರದ ಹೃದಯನಾರೆಂ
ದರಸಿ ಕೇಳಿದನಲ್ಲಿರುತಿಹ ಮಹಾಮುನೀಶ್ವರರ || ೩೨ ||

ಕೆಲರು ಗೋಧಿಯ ಸಾಮೆಯನು ಕೆಲ
ಕೆಲರು ನವಣೆಯ ಕಂಬು ಜೋಳವ
ಕೆಲರು ಹಾರಕನೆಂದು ಕೆಲವರು ನೆಲ್ಲನತಿಶಯವ
ಕೆಲರು ನರೆದಲೆಗನನು ಪತಿಕರಿ
ಸಲದ ನೋಡಿದ ನೃಪತಿಯದರೊಳು
ಹಲವು ಮತವೇಕೊಂದನೇ ಪೇಳೆಂದ ಗೌತಮನು || ೩೩ ||

ಅನಿಲಸುತ=ಹನುಮಂತ. ಬಿನ್ನೈಸು=ವಿಜ್ಞಾಪಿಸು ಇನಕುಲಾನ್ವಯ ತಿಲಕ=ಸೂರ್ಯವಂಶಕ್ಕೆ ಭೂಷಣನಾದ ರಾಮ. ತಳುವದೆ=ತಡಮಾಡದೆ. ನರೆದಲೆಗ=ಬತ್ತ. ಪತಿಕರಿಸು=ಹೊಗಳು, ಗೌರವಿಸು.

ದಾಶರಥಿ ಚಿತ್ತೈಸು ನಮ್ಮಯ
ದೇಶಕತಿಶಯ ನರೆದಲಗನೇ
ವಾಸಿಯುಳ್ಳವನೀತ ಮಿಕ್ಕಿನ ಧಾನ್ಯವೇಕೆನಲು
ಲೇಸನಾಡಿದ ಮುನಿಪ ಗೌತಮ
ದೋಷರಹಿತನು ಪಕ್ಷಪಾತವ
ನೀಸು ಪರಿಯಲಿ ಮಾಡುವರೆ ಶಿವಯೆಂದನಾ ವ್ರಿಹಿಗ ॥ ೩೪ ॥

ಎಲ್ಲ ಧರ್ಮದ ಸಾರವನು ನೀವ್
ಬಲ್ಲರರಿಯದೆ ಯೆಲ್ಲರನು ನೀ
ವಿಲ್ಲಿ ನುಡಿವ ಯುಪೇಕ್ಷೆಯುಂಟೇ ಸಾಕದಂತಿರಲಿ
ನೆಲ್ಲು ನಾನಿರೆ ಗೋಧಿ ಮೊದಲಾ
ದೆಲ್ಲ ಧಾನ್ಯಗಳಿರಲುಯಿದರಲಿ
ಬಲ್ಲಿದನು ನರೆದಲೆಗನೆಂಬುದಿದಾವ ಮತವೆಂದ ॥ ೩೫ ॥

ಏನೆಲವೊ ನರೆದಲೆಗ ನೀನು ಸ
ಮಾನನೇ ಯೆನಗಿಲ್ಲಿ ನಮ್ಮನು
ದಾನವಾಂತಕ ಬಲ್ಲನಿಬ್ಬರ ಹೆಚ್ಚು ಕುಂದುಗಳ
ಜಾನಕಿ ಪತಿಯ ಸನಿಹದಲಿ ಕುಲ
ಹೀನ ನೀನು ಪ್ರತಿಷ್ಠ ಸುಡು ಮತಿ
ಹೀನ ನೀನೆಂದೆನುತ ಖತಿಯಲಿ ಬೈದು ಭಂಗಿಸಿದ ॥ ೩೬ ॥

ಲೋಕದಲಧಿಕ ಭೋಜನವಿದೆಂ
ದಾಕೆವಾಳರು ಬುಧರು ಜರೆದು ನಿ
ರಾಕರಿಸಿ ಬಿಡಲಂತು ನೀ ಶೂದ್ರಾನ್ನವಾದೆಯಲ
ನಾಕನಿಳೆಯರು ಸಾಕ್ಷಿ ನಿನ್ನ ವಿ
ವೇಕಿಗಳು ಮೆಚ್ಚುವರೆ ಬಾಹಿರ
ಸಾಕು ನಡೆ ನೀನಾವ ಮಾನ್ಯನು ಕಡೆಗೆ ತೊಲಗೆಂದ ॥ ೩೭ ॥

ಚಿತ್ತೈಸು=ಕೇಳು. ವಾಸಿ=ಕೀರ್ತಿ, ಹೆಸರು. ವ್ರಿಹಿಗ=ಬತ್ತ. ಬಲ್ಲಿದ=ಶ್ರೇಷ್ಠ. ದಾನವಾಂತಕ=ರಾಕ್ಷಸರನ್ನು ನಾಶಮಾಡಿದವನು. ಸನಿಹದ=ಸನ್ನಿಧಿಯಲ್ಲಿ. ಖತಿ=ಕೋಪ. ಆಕೆವಾಳ=ಶೂರ, ಸಮರ್ಥ. ನಾಕನಿಳೆಯರು=ಸ್ವರ್ಗವೇ ಮನೆಯಾದವರು. ಬಾಹಿರ=ಶೂದ್ರ, ಅಸ್ಪೃಶ್ಯ.

ಕ್ಷಿತಿಯಮರರುಪನಯನದಲಿ ಸು
ವ್ರತ ಸುಭೋಜನ ಪರಮ ಮಂತ್ರಾ
ಕ್ಷತೆಗಳಲಿ ಶುಭಶೋಭನದಲಾರತಿಗೆ ಹಿರಿಯರಲಿ
ಕ್ರತುಗಳೆಡೆಯೊಳಗರಮನೆಯಲಿ
ಪ್ರತಿದಿನವು ರಂಜಿಸುತ ದೇವರಿ
ಗತಿಶಯದ ನೈವೇದ್ಯ ತಾನಹೆನೆಂದನಾ ವ್ರಿಹಿಗ || ೩೮ ||

ಜನಪರಿಗೆ ಶಿಶುಗಳಿಗೆ ಬಾಂಧವ
ಜನರೆಡೆಗೆ ಬ್ರಹ್ಮರ ಸಮಾರಾ
ಧನೆಗೆ ವಿದ್ಯಾರಂಭ ಕಾಲಕೆ ಸಕಲ ಭೂಸುರರ
ಮನೆಗಳಲಿ ಹರಿದಿವಸದೌಪಾ
ಸನೆಗಳಲಿ ತಾ ಯೋಗ್ಯನಹುದೆಂ
ದೆನಿಸಿಕೊಂಬೆನು ನೀನಯೋಗ್ಯನು ಭ್ರಷ್ಟ ತೊಲಗೆಂದ || ೩೯ ||

ಹೊಸ ಮನೆಯ ಪುಣ್ಯಾರ್ಚನೆಗೆ ಮಿಗೆ
ಯೆಸೆವ ಮದುಮಕ್ಕಳಿಗೆ ಸೇಸೆಗೆ
ವಸುಮತೀಶರ ಗರುಡಿಯಲಿ ಶಸ್ತ್ರಾಸ್ತ್ರದರ್ಚನೆಗೆ
ಎಸೆವ ವಿಪ್ರರ ಫಾಲದಲಿ ರಂ
ಜಿಸುವ ಗಂಧಾಕ್ಷತೆಯಹೆನು ಭಾ
ವಿಸಲು ಲೋಕದೊಳಾರು ಸರಿಯೆಂತೆಂದನಾ ವ್ರಿಹಿಗ || ೪೦ ||

ಧರಣಿಯಮರರು ಮಂತ್ರ ತಂತ್ರೋ
ಚ್ಚರಣೆಯಲಿ ಹಸ್ತಾಂಬುಜದಿ ಮಿಗೆ
ಹರಸಿ ಕೊಡಲಕ್ಷತೆಯ ಮಂಡೆಯೊಳಾಂತ ಮಹಿಮರಿಗೆ
ದುರಿತ ದುಃಖ ವಿನಾಶ ಮಂಗಳ
ಕರವಹುದು ತಾನೀವೆ ಸಂತತ
ಸಿರಿಯ ಸಂಪತ್ತಾಯುವನು ಕೇಳೆಂದನಾ ವ್ರಿಹಿಗ || ೪೧ ||

ಪರಿಮಳದ ಚಂದನದ ತರುವಿಗೆ
ಸರಿಯೆ ವೊಣಗಿದ ಕಾಷ್ಠ ಗೋವಧು
ಕರೆದ ಹಾಲಿಗೆ ಕುರಿಯ ಹಾಲಂತರವೆ ಭಾವಿಸಲು

ಕ್ಷಿತಿಯಮರ=ಬ್ರಾಹ್ಮಣ. ಕ್ರತು=ಯಾಗ. ಬ್ರಹ್ಮರ=ಬ್ರಾಹ್ಮಣರ. ಹರಿದಿವಸ=ಏಕಾದಶಿ. ಔಪಾಸನೆ=ಪೂಜೆ. ಸೇಸೆ=ಅಕ್ಷತೆ. ವಸುಮತೀಶ=ದೊರೆ. ಫಾಲ=ಹಣೆ. ಧರಣಿಯಮರ=ಬ್ರಾಹ್ಮಣ. ಹಸ್ತಾಂಬುಜ=ಕರಕಮಲ. ದುರಿತ=ಪಾಪ. ಚಂದನ=ಗಂಧ. ಎಣೆ ಕಾಷ್ಠ=ಕಟ್ಟಿಗೆ. ಅಂತರ=ಸಮ.

ಪರಮ ಸಾಹಸಿ ವೀರ ಹನುಮಗೆ
ಮರದ ಮೇಲಣ ಕಪಿಯು ತಾನಂ
ತರವೆ ಫಡ ನೀನೆನಗೆ ಸರಿಯೇ ಭ್ರಷ್ಟ ತೊಲಗೆಂದ ॥ ೪೨ ॥

ಸುರನದಿಗೆ ತಾ ಸರಿಯೆ ಕಾಡೊಳು
ಹರಿವ ಹಳ್ಳದ ನೀರು ತಾ ಗರುಡನ
ಮರಿಗೆ ಹದ್ದಂತರವೆ ಹಂಸಗೆ ಬಕನು ಹೋಲುವುದೆ
ಸರಸ ಮರಿ ಕೋಗಿಲೆಗೆ ವಾಯಸ
ನಣಕಿಸುವ ತೆರನಾಯ್ತು ಸಾಕಿ
ನ್ನರೆದಲಗ ನೀನಾವ ಮಾನ್ಯನು ಕಡೆಗೆ ತೊಲಗೆಂದ ॥ ೪೩ ॥

ನುಡಿಯ ಕೇಳುತ ಕನಲಿ ಕಂಗಳು
ಕಿಡಿಮಸಗಿ ಖತಿಗೊಂಡು ನುಡಿದನು
ಸಿಡಿಲ ಘರ್ಜನೆಯಂತೆ ಸಭೆಯಲಿ ಜರೆದನಾ ವ್ರಿಹಿಯು
ನುಡಿಗೆ ಹೇಸದ ಭಂಡ ನಿನ್ನೊಳು
ಕೊಡುವರೇ ಮಾರುತ್ತರವ ಕಡು
ಜಡನಲಾ ನಿನ್ನೊಡನೆ ಮಾತೇಕೆಂದ ನರೆದಲಗ ॥ ೪೪ ॥

ಸತ್ಯಹೀನನು ಬಡವರನು ಕ
ಣ್ಣೆತ್ತಿ ನೋಡೆ ಧನಾಢ್ಯರನು ಬೆಂ
ಬತ್ತಿ ನಡೆವವುಪೇಕ್ಷೆ ನಿನ್ನದು ಹೇಳಲೇನದನು
ಹೆತ್ತ ಬಾಣಂತಿಯರು ರೋಗಿಗೆ
ಪತ್ಯ ನೀನಹೆ ಜೆಣದ ಬಾಯಿಗೆ
ತುತ್ತು ನೀನಹೆ ನಿನ್ನ ಜನ್ಮ ನಿರರ್ಥಕರವೆಂದ ॥ ೪೫ ॥

ಸತ್ತದಿನದಾರಭ್ಯ ಮನುಜರು
ಮತ್ತೆ ಕರ್ಮವ ಹೊತ್ತು ಪಿಂಡವ
ನಿತ್ತು ತಪ್ಪದೆ ಮತ್ತೆ ವಾಯಸಕುಲವ ಕರಕರದು

ಸುರನದಿ=ಗಂಗಾನದಿ. ಬಕ=ಕೊಕ್ಕರೆ. ವಾಯಸ=ಕಾಗೆ. ಕನಲಿ = ಕೋಪಿಸಿಕೊಂಡು.
ಖತಿಗೊಂಡು = ಕೋಪಗೊಂಡು. ಮಾರುತ್ತರ-ಪ್ರತ್ಯುತ್ತರ. ಧನಾಢ್ಯ=ಶ್ರೀಮಂತ.

ತುತ್ತನಿಡುವರು ಎಳ್ಳು ದರ್ಭೆಗೆ
ಶೆತ್ತಿಗನು ನೀನಾದೆ ಕೀರ್ತಿಯ
ಹೊತ್ತುಕೊಂಡೆ ದುರಾತ್ಮ ನಿನ್ನೊಳು ಮಾತದೇಕೆಂದ || ೪೬ ||

ಮಳೆದೆಗೆದು ಬೆಳೆಯಡಗಿ ಕ್ಷಾಮದ
ವಿಲಯಕಾಲದೊಳನ್ನವಿಲ್ಲದೆ
ಅಳಿವ ಪ್ರಾಣಿಗಳಾದರಿಸಿ ಸಲಹುವೆನು ಜಗವರಿಯೆ
ಎಲವೊ ನೀನೆಲ್ಲಿಹೆಯೊ ನಿನ್ನಯ
ಬಳಗವದು ತಾನೆಲ್ಲಿಹುದುಯಿಾ
ಹಲವು ಹುಲು ಧಾನ್ಯಗಳೆನಗೆ ಸರಿದೊರೆಯೆ ಕೇಳೆಂದ || ೪೭ ||

ಬಲ್ಲಿದರು ಬರೆ ಬಡವರಲಿ ನಿ
ನ್ನಲ್ಲಿಯುಂಟುವುಪೇಕ್ಷೆ ನಮ್ಮಲಿ
ಸಲ್ಲದೀ ಪರಿ ಪಕ್ಷಪಾತವದಿಲ್ಲ ಭಾವಿಸಲು
ಬಲ್ಲಿದರು ಬಡವರುಗಳೆನ್ನದೆ
ಎಲ್ಲರನು ರಕ್ಷಿಸುವೆ ನಿರ್ದಯ
ನಲ್ಲ ತಾ ನಿನ್ನಂತೆ ಎಲ ಕುಟಿಲಾತ್ಮ ಹೋಗೆಂದ || ೪೮ ||

ನಾನೆಲ್ಲೈ ಲೋಕದಲಿ ನಿರ್ದಯನು ಬಳಿ
ಕೇನಲ್ಲೈ ಸದ್ಧರ್ಮದಲಿ ಮಧು
ಪಾನವಾದೆಯಲಾ ದುರಾತ್ಮಕ ನಿನ್ನ ಸೇವಿಸಿದ
ದಾನವರು ಮಾನವ ಕಿರಾತರು
ಜ್ಞಾನವಳಿದು ವಿಕಾರದಲಿ ಮತಿ
ಹೀನರಾದರು ನಿನ್ನ ಗುಣವೇನೆಂದನು ವ್ರಿಹಿಗ || ೪೯ ||

ಆಡಬಹುದತಿಶಯವ ನೀ ಕೊಂ
ಡಾಡಿ ಕೊಂಬರೆ ಸಾಕು ಸಜ್ಜನ
ರಾಡಿದರೆ ಪತಿಕರಿಸೆ ಲಜ್ಜೆಗೆ ಸಿರವ ಬಾಗುವರು
ನೋಡಿರೈ ಸಭೆಯವರು ದುರ್ಮತಿ
ಗೇಡಿ ಯಿವನಾಡುವದ ನಾವಿ
ನ್ನಾಡಿದರೆ ಹುರುಳಿಲ್ಲ ಶಿವಶಿವಯೆಂದ ನರೆದಲಗ || ೫೦ ||

ಶೆತ್ತಿಗ=ಸ್ನೇಹಿತ. ವಿಲಯಕಾಲ= ಪ್ರಳಯಕಾಲ. ಬಲ್ಲಿದರು = ಶ್ರೀಮಂತರು, ಶಕ್ತರು. ಕುಟಿಲಾತ್ಮ=ಆತ್ಮವಂಚಕ. ಕಿರಾತ=ಬೇಡ. ದುರ್ಮತಿಗೇಡಿ=ದುರ್ಬುದ್ಧಿಯುಳ್ಳವನು. ಹುರುಳು=ಸಾರ.

ಸತ್ತವರ ಪ್ರತಿಬಿಂಬರೂಪನು
ಬಿತ್ತರಿಸಿ ಪಿತೃನಾಮಗಳ ನಿನ
ಗಿತ್ತು ಮೂವರ ಪೆಸರಿನಲಿ ಕರಕರೆದು ದರ್ಭೆಯಲಿ
ನೆತ್ತಿಯನು ಬಡಿ ಬಡಿದು ಕಡೆಯಲಿ
ತುತ್ತನಿಡುವರು ಪಶುಗಳಿಗೆ ನೀ
ನೆತ್ತಿದೆಯೆಲಾ ತನುವ ಸುಡಬೇಕೆಂದ ನರೆದಲೆಗ || ೫೧ ||

ಏನಿಹಿರಿ ಹಿರಿಕಿರಿದ ನುಡಿಯದೆ
ಮೌನದೀಕ್ಷಿತರಾದಿರಲ ಕಂ
ಡೇನು ಮುರಿದಾಡುವಿರಸಾಧ್ಯವೊ ಸಾಧ್ಯವೋ ನಿಮಗೆ
ಈ ನಪುಂಸಕನಲಿ ನಿರಂತರ
ವೇನು ಕಾರಣ ವಾದವಿದು ನಮ
ಗೇನು ಬುದ್ಧಿಯನರುಹುವಿರಿ ಪೇಳೆಂದ ನರೆದಲೆಗ || ೫೨ ||

ಮಸೆದುದಿತ್ತಂಡಕ್ಕೆ ಮತ್ಸರ
ಪಿಸುಣ ಬಲರತಿ ನಿಷ್ಠುರರು ವಾ
ದಿಸಲು ಕಂಡನು ನೃಪತಿ ಮನದಲಿ ನೋಡಿ ನಸುನಗುತ
ಹಿಸುಣರಿವದಿರ ಮತ್ಸರವ ಮಾ
ಣಿಸುವ ಹದನೇನೆನುತ ಯೋಚಿಸಿ
ದಸುರ ಮುನಿಪರ ನೋಡೆ ಗೌತಮ ಮುನಿಪನಿಂತೆಂದ || ೫೩ ||

ಅರಸುಗಳು ನಾವೆಲ್ಲ ಭೂಮೀ
ಸುರರು ನೆರದಿಹ ದಾನವರು ವಾ
ನರರು ನಮಗೀ ನ್ಯಾಯವನು ಪರಿಹರಿಸಲಳವಲ್ಲ
ಕರಸುವೆವು ಹರಿಹರವಿರಿಂಚಾ
ದ್ಯರನಯೋಧ್ಯೆಗೆ ಯಿವರ ಗುಣವಾ
ಧರಿಸಿ ಪೇಳ್ವರು ನಯದೊಳೆಂದನು ರಾಮ ನಸುನಗುತ || ೫೪ ||

ಪರಮ ಧಾನ್ಯದೊಳಿಬ್ಬರೇ ಇವ
ರಿರಲಿ ಸೆರೆಯೊಳಗಾರು ತಿಂಗಳು
ಹಿರಿದು ಕಿರಿದೆಂಬಿವರ ಪೌರುಷವರಿಯಬಹುದಿನ್ನು

ಮೌನದೀಕ್ಷಿರಾದಿರಿ=ಮೌನತಾಳಿದಿರಿ. ಮಸೆ=ತೀವ್ರಗೊಳ್ಳು. ಇತ್ತಂಡ=ಎರಡು ಕಡೆ.
ಮತ್ಸರ=ಹೊಟ್ಟೆಕಿಚ್ಚು. ಪಿಸುಣ=ಚಾಡಿಕೋರ. ಮಾಣಿಸು=ತಡೆ, ತಪ್ಪಿಸು.
ಹದನು=ಉಪಾಯ. ವಿರಿಂಚಿ=ಬ್ರಹ್ಮ.

ಪುರಕೆ ಗಮನಿಸಿ ನಾವು ನಿಮ್ಮನು
ಕರೆಸುವೆವು ಕೇಳೆನುತಯೋಧ್ಯಾ
ಪುರಿಗೆ ಪಯಣವ ಮಾಡಹೇಳಿದನಾ ವಿಭೀಷಣಗೆ || ೫೫ ||

ಸೆರೆಗೆ ನಮ್ಮನು ನೂಕಿ ದೇವರು
ಸಿರಿಯ ಮದದಲಿ ಕಳೆದರೆಮ್ಮನು
ಮರದು ಸಲಹುವರಾರು ನಿಮ್ಮಯ ಕರುಣ ಹೊರತಾಗಿ
ಧರೆಯೊಳಿನ್ನಪಕೀರ್ತಿ ನಾರಿಯು
ಸೆರಗ ಹಿಡಿವುದೆ ಲೇಸೆನುತ ತವೆ
ಕರಮುಗಿದು ತಲೆಗುತ್ತಿ ಪೇಳಿದನಾಗ ನರೆದಲಗ || ೫೬ ||

ಆಗಲದಕೇನೆಂದು ಕರುಣಾ
ಸಾಗರನು ಬೀಳ್ಕೊಟ್ಟನವರನು
ಯೋಗಿಗಳ ವಶಮಾಡಿ ಗೌತಮಮುನಿಯನುಪಚರಿಸಿ
ರಾಗ ಮಿಗೆ ಮುನಿವರರನಲ್ಲಿ ಸ
ರಾಗದಿಂದಲೆ ಕಳುಹಿ ಬಳಿಕಾ
ಯಾಗಸಂರಕ್ಷಕನು ವೀಳೆಯವಿತ್ತನನಿಬರಿಗೆ || ೫೭ ||

ಹರದುದಾಕ್ಷಣದಲ್ಲಿ ವ್ಯೋಮದಿ
ಸುರರು ಮಿಗೆ ಕೊಂಡಾಡೆ ಭೂಸುರ
ವರರು ಕಳುಹಿಸಿಕೊಂಡು ಹೊಕ್ಕರು ತಮ್ಮ ಮಂದಿರವ
ಹರುಷ ತಗ್ಗಿತು ತಾವರೆಗೆ ಮುಖ
ವರಳಿದವು ನೈದಿಲೆಗೆ ತಾರಕೆ
ನೆರೆದುವಾಕಾಶದಲಿ ಅಸ್ತಾಂಬುಧಿಗೆಯಿನನಿಳಿದ || ೫೮ ||

ನೆಗಳಿದವು ಬೊಂಬಾಳದೀವಿಗೆ
ಝಗಝಗಿವ ನವರತ್ನದೊಡುಗೆಯ
ಹೊಗರೊಗುವ ಕೈದುಗಳ ಸುಭಟರು ಮುಂದೆ ಸಂದಣಿಸೆ
ನೆಗಹಿ ಕರಗಳ ಪಾಠಕರು ಬಿರು
ದುಗಳ ಹೊಗಳಲು ಚೀರಿದವು ಕಹ
ಳೆಗಳು ರಭಸದಿ ಬಂದು ಹೊಕ್ಕನು ನೃಪತಿಯರಮನೆಯ || ೫೯ ||

ಅಪಕೀರ್ತಿನಾರಿ=ಅಪಕೀರ್ತಿಯೆಂಬ ಹೆಂಗಸು. ತಲೆಗುತ್ತಿ=ತಲೆತಗ್ಗಿಸಿ. ಅನಿಬರಿಗೆ=ಅಷ್ಟು ಜನರಿಗೆ. ವ್ಯೋಮ=ಆಕಾಶ. ತಾರಕೆ=ನಕ್ಷತ್ರ. ಅಸ್ತಾಂಬುಧಿ=ಸೂರ್ಯ ಮುಳುಗುವ ಸಮುದ್ರ, ಪಶ್ಚಿಮ ದಿಕ್ಕು. ನೆಗಳಿದವು=ಹೊಳೆದವು. ಬೊಂಬಾಳ ದೀವಿಗೆ=ಪಂಜು. ಹೊಗರ್=ಕಾಂತಿ. ಕೈದು=ಆಯುಧ. ನೆಗಹಿ=ಎತ್ತಿ. ಪಾಠಕ=ವಂದಿಮಾಗಧರು.

ಗಗನಮಣಿ ದಿಗುತಟವ ಸಾರಲು
ಹೊಗರೊಗುವ ಬಲು ಕಾಳಗ[?]ದಿ ಸಲೆ
ಜಗವ ಮುಸುಕಲು ಜನರು ನಿದ್ರಾಂಗನೆಯ ಕೇಳಿಯಲಿ
ದೃಗುಯುಗಳನೆವೆ ಬಿಗಿದಿರಲು ಮನ
ವಿಗತಿವಡೆದಿರೆ ಧರೆಗೆ ದಿನಮಣಿ
ಮೊಗವ ತೋರುವೆನೆನುತ ಪೂರ್ವಾಚಲಕೆ ನಡೆತಂದ ॥ ೬೦ ॥

ಅರಸುನುಪ್ಪವಡಿಸಿದ ಪೂರ್ವದ
ತರಣಿಗರ್ಘ್ಯವ ಕೊಟ್ಟು ಭೂಸುರ
ವರರ ಮಂತ್ರಾಕ್ಷತೆಯ ಕೈಗೊಂಡನನುಜನೊಡಗೂಡಿ
ಹರುಷ ಮಿಗೆ ಪಾಠಕರ ಸಂದಣಿ
ನೆರೆಯೆ ಮುನಿಕುಲದೊಡನೆ ನಿಜಮಂ
ದಿರವ ಹೊರವಂಟವನಿಪತಿಯೋಲಗಕೆ ನಡೆತಂದ ॥ ೬೧ ॥

ಕರಸಿದನು ರಾವಣನ ತಮ್ಮನ
ತರಣಿಸುತ ನಳನೀಲ ಜಾಂಬವ
ಶರಭ ಶಶಬಲಿಯಾದ ಮುಖ್ಯ ಸಮಸ್ತ ವಾನರರ
ಹರುಷಮಿಗೆ ಸತ್ಕರಿಸಿ ಮುಂದಕೆ
ತೆರಳಬೇಕೆನೆ ವೀರಸುಭಟರು
ನೆರೆದುರುಬ್ಬಿ ಕೈದುಗಳ ಜಡಿದಗ್ಗಳೆಯರ‍್ಹೈದಿದರು ॥ ೬೨ ॥

ಹೊಡೆವ ತಮ್ಮಟೆ ಭೇರಿ ಡಮರುಗ
ಗಿಡಿಬಿಡಿ ಡೌಡೆ ಡಿಂಡಿಮ ಢಕ್ಕೆ
ನುಡಿವ ಶಂಖ ಮೃದಂಗ ಘನನಿಸ್ಸಾಳ ಮೊದಲಾದ
ಬಡಿವ ನಾನಾ ವಾದ್ಯರವ ಭೋ
ರಿಡಲು ಜಯರವದೊಡನೆ ರಘುನೃಪ
ಮಡದಿ ಸಹಿತೇರಿದನು ಧನಪನ ದಿವ್ಯ ಮಣಿರಥವ ॥ ೬೩ ॥

ಒಡನೆ ಏರಿದನೂರ್ಮಿಳಾಪತಿ
ಬಿಡದೆ ಚಿಮ್ಮುವ ಚಾಮರವ ಸಾ
ಲಿಡುತ ನಡೆದುದು ಸಕಲದಳ ಸುಗ್ರೀವನಾಜ್ಞೆಯಲಿ

ಗಗನ ಮಣಿ=ಸೂರ್ಯ. ದಿಗುತಟ=ದಿಕ್ಕಿನ ಅಂಚು. ಕೇಳಿ=ಆಟ. ದೃಗುಯುಗಳ=ಎರಡು ಕಣ್ಣು. ವಿಗತಿವಡೆ=ಮಂಕಾಗಿರಲು. ದಿನಮಣಿ=ಸೂರ್ಯ. ಪೂರ್ವಾಚಲ=ಪೂರ್ವ ಪರ್ವತ. ಉಪ್ಪವಡಿಸಿದ=ಎದ್ದ. ತರಣಿ=ಸೂರ್ಯ, ಅರ್ಘ್ಯ=ಪೂಜಾಜಲ. ಉರುಬಿ=ರಭಸದಿಂದ ಬರು. ಕೈದು=ಆಯುಧ. ತರಣಿಸುತ=ಸುಗ್ರೀವ. ಅಗ್ಗಳೆಯರು=ಶ್ರೇಷ್ಠರು. ಗಿಡಿಬಿಡಿ=ಒಂದು ವಾದ್ಯ ವಿಶೇಷ. ನಿಸ್ಸಾಳ=ಭೇರಿ. ಧನಪ=ಕುಬೇರ.

ಕಡುಮನದ ರಕ್ಕಸರು ಏರಿದ
ರೊಢನೆ ಕರಿರಥತುರಗವನು ಪಡೆ
ಕಡಲ ಜಲ ಮೊರೆವಂತೆ ಮೊರೆದುದು ನೃಪನ ಬಲಜಲಧಿ || ೬೪ ||

ಕಳೆದು ಬಂದರು ಪಂಚನಂದಿಯು
ಬಳಿಯಲೊಪ್ಪುವ ಪಂಚನದಿಗಳ
ಹೊಳೆಯು ದಾಂಟುತ ಕಂಡು ಕಿಷ್ಕಿಂಧಾದ್ರಿಗೈತಂದು
ಲಲನೆ ಸೀತಾದೇವಿ ರವಿಜನ
ಲಲನೆಯರ ತಾ ಕರಸಿ ತನ್ನೊಡ
ನೊಲಿದು ಬರಬೇಕೆನಲು ಬಂದರು ದೇವಿಯರನೈದಿ || ೬೫ ||

ಹೊಲಬುದಪ್ಪದೆ ಸಕಲ ನಾಯಕ
ದಳಸಹಿತ ಮುಂಬಟ್ಟೆಯಲಿ ಮುನಿ
ಕುಲದ ದರುಶನವಾಗಲಾಶೀರ್ವಾದವನು ಕೊಂಡು
ಬಳಿವಿಡಿದು ಬರೆ ಜನರ ಪಾಪವ
ಕಳೆದು ಸಲಹುವ ತುಂಗಭದ್ರೆಯ
ಕಳೆದುಬಂದರು ಮುಂದೆ ಭಾರದ್ವಾಜನಾಶ್ರಮಕೆ || ೬೬ ||

ಇಳಿದುದಾ ಬನದೊಳಗೆ ಪಾಳಯ
ಬಳಸಿಬಿಟ್ಟುದು ಮೂರು ಯೋಜನ
ದಳತೆಯಲಿ ಕಪಿಸೇನೆಯಾ ಮಧ್ಯದಲಿ ನೃಪಭವನ
ಹಳದಿ ಕೆಂಪಿನ ನೀಲವರ್ಣದ
ಛಳೆಯಪಟ್ಟೆಯ ಗುಡಿ ಗುಡಾರದಿ
ಹೊಳೆವ ರತ್ನಗಳಿಂದ ಕಲಶದ ಸಾಲು ರಂಜಿಸಿತು || ೬೭ ||

ಅರಮನೆಯ ಬಲವಂಕದಲಿ ನಿಜ
ಶರಣನರಮನೆ ವಾಮಭಾಗದಿ
ತರಣಿಸುತ ಸುಗ್ರೀವನಂಗದ ಜಾಂಬವಾದಿಗಳ

ಅದ್ರಿ=ಬೆಟ್ಟ. ರವಿಜನ=ಸುಗ್ರೀವನ. ಹೊಲಬು=ದಾರಿ, ಕ್ರಮ. ಮುಂಬಟ್ಟೆ=ಮುಂದಿನ ದಾರಿ. ಬಳಿವಿಡಿ=ಹಿಂಬಾಲಿಸು. ಛಳೆಯ=ಉತ್ಸವದ ಚತ್ರಿ (?). ಪಟ್ಟೆಯ=ರೇಷ್ಮೆ. ಬಲವಂಕ=ಬಲಪಕ್ಕ. ವಾಮಭಾಗ=ಎಡಪಕ್ಕ.

ವರ ಭವನವೆಸೆದಿರಲು ಮೇಲು
ಪ್ಪರಿಗೆಗಳ ರಂಜಿಸಿ ಕವಾಟದಿ
ಮೆರೆದುದಗ್ಗದ ವೀರ ರಾಮನ ಪಾಳ್ಯ ಬನದೊಳಗೆ || ೬೮ ||

ಹೊರವಳಯದಲಿ ದಾನವರ ಬಲ
ಶರಧಿ ಬಿಟ್ಟುದು ಬಳಸಿ ಸುತ್ತಲು
ಕರಿತುರಗ ರಥ ಪಾಯ್ದಳವು ಸಂದಣಿಸಿ ನಿಂದಿರಲು
ಮೊರೆವ ರಭಸವ ಕಂಡು ಸುರಮುನಿ
ವರರಿದೇನೋಯೆನುತ ನಿಜಮಂ
ದಿರವ ಹೊರವಂಟಲ್ಲಿ ಕೇಳ್ದರು ರಾಮನತಿಶಯವ || ೬೯ ||

ಉರಗಮಾಲಿ ಮತಂಗ ಗಾರ್ಗ್ಯಾಂ
ಗಿರಸ ಗಾಲವ ಕಣ್ವ ಜಯಮುನಿ
ಪರಶುರಾಮ ಪರಾಶ ಕೌಶಿಕ ದಾಲ್ಭ್ಯ ಮೊದಲಾದ
ವರಮುನಿಗಳೊಡನೈದಿ ಬಂದನು
ಭರದಿ ಭಾರದ್ವಾಜ ಮುನಿ ರಘು
ವರನ ಕಾಣಿಸಿಕೊಂಡು ಹರಸಿದರತುಳ ವಿಭವದಲಿ || ೭೦ ||

ಬಂದ ಮುನಿಗವನೀಶ ವಂದಿಸಿ
ನಿಂದು ಕರಗಳ ಮುಗಿದು ವಿನಯದೊ
ಳೆಂದ ನಿಮ್ಮ ಸದಾಗ್ನಿಹೋತ್ರ ಸುಯಾಗ ಕರ್ಮಗಳು
ಸಂದ ಜಪ ತಪಗಳು ಸುರಕ್ಷಿತ
ದಿಂದ ಮೆರೆವುದೆ ದಾನವರ ಭಯ
ದಿಂದ ದುರ್ಘಟವಿಲ್ಲಲಾ ಮುನಿನಾಥ ಕೇಳೆಂದ || ೭೧ ||

ದಶರಥಾತ್ಮಜ ನೀನು ಲಂಕೆಯೊ
ಳಸುರ ವೀರರು ಕುಂಭಕರ್ಣನು
ದಶಶಿರನು ಮೊದಲಾದ ದುರ್ಜನರೆಲ್ಲರನು ಮಡುಹಿ
ಅಸುರರನುಜಗೆಯಚಲ ಪದವಿಯ
ನೊಸೆದು ಸಲಹಿದೆ ನಮ್ಮ ಕರುಣಾ
ರಸದಿ ಪಾಲಿಸೆ ಬಂದೆಯೆಂದುಪಚರಿಸಿದನು ನೃಪನ || ೭೨ ||

ಕವಾಟ=ಬಾಗಿಲು. ಬಲಶರಧಿ=ಸೇನಾ ಸಮುದ್ರ. ಪಾಯ್ದಳ=ಕಾಲಾಳು. ಅತುಳ=ಅಪಾರ. ವಿಭವ=ಉತ್ಸಾಹ. ಅಗ್ನಿಹೋತ್ರ=ಬೆಂಕಿಯಲ್ಲಿ ದೇವತೆಗಳಿಗಾಗಿ ತುಪ್ಪವೇ ಮೊದಲಾದ ವಸ್ತುಗಳನ್ನು ಅರ್ಪಿಸುವುದು. ದುರ್ಘಟ=ವಿಪತ್ತು. ಮಡುಹಿ=ಸಾಯಿಸಿ. ಒಸೆದು=ಪ್ರೀತಿಸಿ.

ಕಮಲಸಂಭವನಿತ್ತ ವರದಲಿ
ಕುಮತಿ ದಾನವರತುಳ ಬಲದಿಂ
ದುರುಳ ಕಂಟಕರಾಗಿ ಮಡಿದರು ನಿನ್ನ ಬಾಣದಲಿ
ತಮದ ಗಂಟಲನೊಡೆದು ಮೂಡುವ
ದ್ಯುಮಣಿಯುಂದದಿ ನೀವು ಜನಿಸಿರ
ಲಿಮಗೆ ದನುಜಾಧಮರ ಭಯವೇನೆಂದನಾ ಮುನಿಪ || ೭೩ ||

ಅರಸ ಕೇಳ್ದಾ ಮುನಿಯು ವಚನದ
ಕರುಣರಸ ಧಾರೆಯಲಿಯಂತಃ
ಕರಣ ನನೆದುಪಚರಿಸಿ ಕುಳ್ಳಿರಿಸಿದನು ಮುನಿವರರ
ಮರುತ ಸುತನನು ಕರೆದು ತವಕದಿ
ಭರತನನು ಸಂತೈಸು ಹೋಗೆಂ
ದುರುತರದ ಪ್ರೇಮದಲಿ ಕಳುಹಿಸಲೆರಗಿ ಹೊರವಂಟ || ೭೪ ||

ಹರಿವ ಗಂಗಾನದಿಯ ದಾಂಟುತ
ಭರದಿ ಕಂಡನು ಶೃಂಗಬೇರೀ
ಪುರವ ಹೊಕ್ಕನು ಗುಹನ ಕಾಣಿಸಿಕೊಂಡನುಚಿತದಲಿ
ಮರುತ ಬಿನ್ನೈಸಿದನು ರಘು ನೃಪ
ವರನು ಪೇಳಿದ ಬುದ್ಧಿಯನು ವಿ
ಸ್ತರಿಸೆ ನಿಷಧಾಧಿಪತಿ ಕೇಳ್ದತಿಶಯದ ಹರುಷದಲಿ || ೭೫ ||

ಅನಿಲಸುತ ಬಾ ಮಗನೆ ರಘುನಂ
ದನಗೆ ನಿನ್ನವೊಲಾಪ್ತರಾರೀ
ದನುಜ ಮನುಜ ಭುಜಂಗರೊಳುಂಟೆ ನಿನ್ನ ಹೋಲುವರು
ಹನುಮ ನಂದೀಗ್ರಾಮದಲಿ ಭರ
ತ ನಿಹನಗ್ರಜನಗಲ್ದ ಖೇದದ
ಮನದ ಪರಿತಾಪವನು ಮಾಣಿಸು ಬೇಗ ಹೋಗೆಂದ || ೭೬ ||

ಹರುಷವಿಗೆ ಜನಪದದ ಪರಿಯಂ
ತರದಿ ಬಂದನಿಲಜನ ಕಳುಹಿಸಿ
ಮರಳಿದನು ಗುಹನಿತ್ತ ಮಾರುತಿ ಮುಂದೆ ಪಥವಿಡಿದು

ಕಮಲಸಂಭವ=ಬ್ರಹ್ಮ. ಕಂಟಕ=ಮುಳ್ಳು. ತಮ=ಕತ್ತಲೆ. ದ್ಯುಮಣಿ=ಸೂರ್ಯ. ನನೆದು=ತೋಯ್ದು. ಮರುತಸುತ=ಆಂಜನೇಯ. ಉರುತರ=ವಿಶೇಷವಾದ. ನಿಷಧಾಧಿಪತಿ=ಗುಹ. ಭುಜಂಗರು=ನಾಗರು. ಪರಿತಾಪ=ದುಃಖ.

ಬರುತ ಮಾರ್ಗಾಂತರದಿ ಕಾನನ
ಗಿರಿ ಶಿಖರಗಳ ಕಳೆದು ಬರೆ ವಿ
ಸ್ತರದ ನಂದೀ ಗ್ರಾಮವನು ಕಂಡಲ್ಲಿ ಮನನಲಿದು || ೭೭ ||

ಬಂದು ಭರತನ ಕಂಡು ನಮಿಸಿದ
ಡೆಂದ ನೀನಾರಿಲ್ಲಿಗಿಂದೈ
ತಂದ ಕಾರಣವೇನು ನಿನ್ನಭಿಧಾನವೇನೆನಲು
ನಿಂದು ಕೈಗಳ ಮುಗಿದು ನಸುನಗೆ
ಯಿಂದ ನುಡಿದನು ಹನುಮ ತಾ ರಘು
ನಂದನನ ಸೇವಕನು ಕಳುಹಿದ ದೇವ ನಿಮ್ಮಡಿಗೆ || ೭೮ ||

ರಾವಣನ ಸಂಹರಿಸಿ ಲಂಕೆಯ
ನಾ ವಿಭೀಷಣಗಿತ್ತು ಸೀತಾ
ದೇವಿ ಲಕ್ಷ್ಮಣಸಹಿತ ಭಾರದ್ವಾಜನಾಶ್ರಮಕೆ
ದೇವ ಬಂದನು ಸಕಲ ವಿಭವದಿ
ನೀವು ಚಿತ್ತದೊಳವಧರಿಸಿಯೆನೆ
ಪಾವಮಾನಿಯ ನುತಿಸಿ ತಕ್ಕೈಸಿದನು ಭರತೇಂದ್ರ || ೭೯ ||

ಹರುಷ ಹೆಚ್ಚಿದ ಮನದಿ ತಮ್ಮನ
ಕರೆದು ಶತ್ರುಘ್ನನನಯೋಧ್ಯಾ
ಪುರಿಗೆ ಕಳುಹಿದ ಜನನಿಯರಿಗೀ ವಾರ್ತೆಯೆಲ್ಲವನು
ಅರುಹಿ ಬಾಯೆನಲಗ್ರಜನ ಸಿರಿ
ಚರಣಕಭಿಮುಖನಾಗಿ ವಂದಿಸಿ
ಹರುಷ ಮಿಗೆ ಹೊರವಂಟು ಹೊಕ್ಕನಯೋಧ್ಯ ಪುರವರವ || ೮೦ ||

ಚೀರಿದವು ಕಹಳೆಗಳು ತಮ್ಮಟೆ
ಭೇರಿ ಶಂಖ ನಿನಾದ ಹಬ್ಬಿತು
ಸಾರಿತಂದಿನ ದಿವಸದಲಿ ಶತ್ರುಘ್ನ ಬಂದನೆನೆ
ಆರತಿಯ ತಳಿಗೆಗಳ ಸಂದಣಿ
ಕೇರಿ ಕೇರಿಯೊಳೈದಿದವು ಕೈ
ವಾರಿಗಳ ಗಡಣದಲಿ ಹೊಕ್ಕನು ರಾಜ ಮಂದಿರವ || ೮೧ ||

ಅಭಿಧಾನ=ಹೆಸರು. ಅವಧರಿಸಿ=ಲಾಲಿಸಿ. ಪಾವಮಾನಿ=ಹನುಮಂತ. ತಕ್ಕೈಸು=ಆಲಿಂಗಿಸು. ನಿನಾದ=ಶಬ್ದ. ತಳಿಗೆ=ತಟ್ಟೆ. ಕೈವಾರಿ=ಹೊಗಳುಭಟ್ಟ. ಗಡಣ=ಸಮೂಹ.

ಜನನಿಯರು ಮೂವರಿಗೆ ನಮಿಸಿದ
ತನುಜನನು ತಕ್ಕೈಸಿ ಪೇಳಿದ
ನಿ ನಕುಲಾನ್ವಯ ಬಂದ ಭಾರದ್ವಾಜನಾಶ್ರಮಕೆ
ಎನಲು ಹರುಷಾನಂದಮಯರಸ
ಹೊನಲಿನೊಳಗೋಲಾಡಿದರು ಮುಖ
ವನಜವರಳಿತು ಜನನಿಯರಿಗವನೀಶ ಕೇಳೆಂದ ॥ ೮೨ ॥

ಕರಸಿದನು ಶತ್ರುಘ್ನ ಮಂತ್ರೀ
ಶ್ವರ ಸುಮಂತನ ಕೂಡೆ ನುಡಿದನು
ತರಣಿಕುಲ ರಾಜೇಂದ್ರ ನಣ್ಣನ ಬರವ ಕೇಳಿದೆವು
ಪುರವ ಶೃಂಗರಿಸಲ್ಲಿ ಕರಿರಥ
ತುರಗ ಮೇಳೈಸಿರಲಿ ಮೋದದ
ತರುಣಿಯರು ಸಂದಣಿಸಿ ನಡೆಯಲಿ ನೃಪನ ದರುಶನಕೆ ॥ ೮೩ ॥

ಎಂದು ಮಂತ್ರಿಯೊಳರುಹಿ ತಾ ನಿಜ
ಮಂದಿರಕೆ ನಡೆತಂದು ಪಯಣವ
ನಂದು ಮಾಡಿದ ಜನನಿ ಕೌಸಲದೇವಿ ಮೊದಲಾದ
ಇಂದುವದನೆಯರೇರುತಿರ್ದರು
ಅಂದಣವ ಸೊಸೆಯರು ವರೂಥದಿ
ಹಿಂದುಮುಂದಿಟ್ಟಣಿಸಿ ನಡೆದುದು ಸತಿಯರೊಗ್ಗಿನಲಿ ॥ ೮೪ ॥

ಪುರಜನವ ಸಂತೈಸಿ ಭೂಸುರ
ವರರ ಮಂತ್ರಾಕ್ಷತೆಯ ಕೈಕೊಂ
ಡರಸ ರಾಮ ಶ್ರೀ ಪದಾಬ್ಜವ ನೆನೆದು ಮನದೊಳಗೆ
ತರಿಸಿ ಮಾಲ್ಯಾಂಬರ ಸುಗಂಧವ
ಕರಸಿಕೊಟ್ಟನು ರಾಜವರ್ಗಕೆ
ಹರುಷದಲಿ ಶತ್ರುಘ್ನನೇರಿದ ದಿವ್ಯಮಣಿ ರಥವ ॥ ೮೫ ॥

ವಿವಿಧವಾದ್ಯ ಧ್ವನಿಯ ಕಹಳಾ
ರವದ ಸನ್ನೆಯೊಳೈದಿಬಹ ನೃಪ
ನಿವಹದಲಿ ಚತುರಂಗ ಸೇನೆಯ ಪದದ ಕೆಂಧೂಳಿ

ಇನಕುಲಾನ್ವಯ=ರಾಮ. ಹೊನಲು=ಪ್ರವಾಹ. ವನಜ=ಕಮಲ. ತರಣಿಕುಲ=ಸೂರ್ಯ ವಂಶ. ಮೋದದ=ಆನಂದದಿಂದ ಕೂಡಿರುವ. ಅಂದಣ=ಪಲ್ಲಕ್ಕಿ. ಇಟ್ಟಣಿಸು=ದಟ್ಟವಾಗಿ. ಒಗ್ಗು=ಸಮೂಹ. ಪದಾಬ್ಜ=ಚರಣ ಕಮಲ. ನಿವಹ=ಸಮೂಹ.

ಭುವನವಾಕಾಶವನು ಮುಸುಕಿದ
ಅವನಿ ನೆಗ್ಗಲು ಬಲವು ಬಲುಭಾ
ರವಣೆಯಲಿ ಹೊರವಂಟನಾ ಶತ್ರುಘ್ನನೊಲವಿನಲಿ || ೮೬ ||

ಸತ್ತಿಗೆಯ ಸಾಲುಗಳ ಬೀಸುವ
ಬಿತ್ತರದ ಚೌರಿಗಳ ರಥದಲಿ
ತೆತ್ತಿಸಿದ ಸೂನಗಿಯ ಸೀಗುರಿ ಗುಡಿ ಪತಾಕೆಗಳ
ಮತ್ತೆ ಗಜಘಟೆ ತುರಗ ಕಾಲಾ
ಳೊತ್ತರಿಸಿ ಬರೆ ಕಮಠ ಕೂರ್ಮರ
ನೆತ್ತಿ ನೆಗ್ಗಲು ನಡೆದುದಗಣಿತ ಸೇನೆ ವಹಿಲದಲಿ || ೮೭ ||

ಪುರವ ಕಳೆದರು ಮುಂದೆ ಯಮುನಾ
ವರನದಿಯನುತ್ತರಿಸೆ ಪಯಣದಿ
ಮೆರೆವ ನಂದೀಗ್ರಾಮವನು ಕಂಡಲ್ಲಿಗೈತಂದು
ಭರತನೊದಗೊಂಡಲ್ಲಿ ಹನುಮನ
ಕರುಣದಲಿ ಸತ್ಕರಿಸಿ ಮುಂದಕೆ
ತೆರಳಿದರು ಕೌಸಲ್ಯ ರಾಮನ ಕಾಣ್ಬ ತವಕದಲಿ || ೮೮ ||

ಇತ್ತ ಕೇಳೈ ಪಾಂಡವಾಗ್ರಜ
ಸತ್ವ ಗುಣನಿಧಿ ರಾಮಚಂದ್ರನು
ವತ್ತರಿಸಿಬರೆ ಕಂಡು ನಲಿಯುತ ಜಾನಕಿಯ ಕರೆದು
ಇತ್ತ ನೋಡೆಲೆ ದೇವಿ ಭರತನ
ಶತ್ರುಹರ ಶತ್ರುಘ್ನರಿವರು ಸ
ಮಸ್ತ ಬಲಸಹಿತಿದಿರು ಬರುತಿದೆ ನೋಡು ನೀನೆಂದ || ೮೯ ||

ಎಂದು ತೋರಿಸಿ ಮನದ ಹರುಷದಿ
ಮಿಂದು ಲಕ್ಷ್ಮಣನೊಡನೆ ಸತಿಸಹಿ
ತಂದು ರಥವೇರಿದನು ರಾಮನೃಪಾಲನಾಕ್ಷಣಕೆ

ಭುವನ=ಭೂಲೋಕ. ಅವನಿ=ಭೂಮಿ. ನೆಗ್ಗಲು=ಕುಸಿಯಲು. ಬಲ=ಸೈನ್ಯ. ಭಾರವಣೆ=ಗಾಂಭೀರ್ಯ, ತೂಕ. ಸತ್ತಿಗೆ=ಛತ್ರಿ. ತೆತ್ತಿಸಿದ=ಮುಚ್ಚಿದ. ಸೂನಗಿ=ಕತ್ತಿ. ಸೀಗುರಿ=ಚಾಮರ. ಗುಡಿ=ಬಾವುಟ. ಘಟೆ=ಸಮೂಹ. ಉತ್ತರಿಸು=ದಾಟು. ಕಮಠ=ಆಮೆ. ವಹಿಲ=ಬೇಗ. ಶತ್ರುಹರ=ಹಗೆಯನು ಕೊಲ್ಲುವನು.

ಮುಂದೆ ನೆನೆದುದು ಬನದೊಳಗೆ ಮುದ
ದಿಂದ ಪಾತಕರುಗ್ಘಡಿಸೆ ನಲ
ವಿಂದ ಮುನಿಕುಲದೊಡನೆ ತೆರಳಿದನಾ ಮಹೀಪಾಲ || ೯೦ ||

ತಲ್ಲಣಿಸಿ ದಶದಿಕ್ಕುಗಳ ಬಲ
ವೆಲ್ಲ ನೆರೆದುದು ವಾನರಾಧಿಪ
ರಲ್ಲಿ ಸುಗ್ರೀವನ ವರೂಥದ ಬಳಿಯೆ ಸಂದಣಿಸೆ
ನಿಲ್ಲದೈದಿದರಾ ವಿಭೀಷಣ
ನಲ್ಲಿ ದಾನವಸೇನೆ ಕೈದುಗ
ಗಳಲ್ಲಿ ಹೊರವಂಟನು ವನಾಲಯದಿಂದಲಿದಿರಾಗಿ || ೯೧ ||

ದೂರದಲಿ ಮಣಿರಥದೊಳಗೆ ರಘು
ವೀರರಿಬ್ಬರು ಕಂಡು ಬರೆ ಹೊಂ
ದೇರನಿಳಿದರು ಭರತ ಶತ್ರುಘ್ನರು ಸರಾಗದಲಿ
ಧಾರುಣಿಗೆ ನ್ಯೈಯಿಕ್ಕಿದರು ಪರಿ
ವಾರವೆಲ್ಲವು ನೊಸಲಕ್ಕೈಗಳ
ಭೂರಿ ಸಂತೋಷದ ಸಮುದ್ರದೊಳಾಳಿತಿಂದಿನಲಿ || ೯೨ ||

ಇಳಿದು ರಥವನು ನೃಪತಿ ಸೀತಾ
ಲಲನೆ ಲಕ್ಷ್ಮಣಸಹಿತ ತಾ ಕೌ
ಸಲೆ ಸುಮಿತ್ರಾದೇವಿ ಕೈಕೆಯ ಚರಣಕಭಿನಮಿಸಿ
ತೊಲಗಿದಸು ಬಂದಂತೆ ತನಯರ
ಚಲುವನೀಕ್ಷಿಸಿ ಜನನಿಯರು ಕಂ
ಗಳಲಿ ಜಲತುಂಬಿ ನೆರೆ ಬಿಗಿಯಪ್ಪಿದರು ನಂದನರ || ೯೩ ||

ವಿಮಲಮತಿ ಶತ್ರುಘ್ನ ಭರತರು
ನಮಿಸಿದರು ರಘುಪತಿಗೆ ಲಕ್ಷ್ಮಣ
ನಮಿಸಿದನು ಭರತಂಗೆ ಭರತಾನುಜನ ಸಂತೈಸಿ
ಸಮತೆಯಲಿ ಸುಗ್ರೀವ ಜಾಂಬವ
ರಮಿತ ಬಲವನು ಜನನಿಯ ಚರಣ
ಕಮಲವನು ಕಾಣಿಸಿದ ಸುಕರದೊಳೂರ್ಮಿಳಾರಮಣ || ೯೪ ||

ಉಗ್ಘಡಿಸು=ಹೊಗಳು. ತಲ್ಲಣಿಸಿ=ಹೆದರಿ. ವನಾಲಯ=ಕಾಡುಮನೆ. ಹೊಂದೇರನು=ಚಿನ್ನದ ತೇರನ್ನು. ಧಾರುಣಿ=ಭೂಮಿ. ನ್ಯೈಯಿಕ್ಕು=ಶರೀರ ಚಾಚು, ನಮಸ್ಕರಿಸು. ನೊಸಲು=ಹಣೆ. ಆಳ್=ಮುಳುಗು. ವಿಮಲಮತಿ=ಶುದ್ಧಮನಸ್ಕ. ಸುಕರ=ಸರಾಗ. ಊರ್ಮಿಳಾರಮಣ=ಲಕ್ಷ್ಮಣ.

ವರವಿಭೀಷಣ ದೇವ ಬಂದಸು
ಭರತ ಶತ್ರುಘ್ನರಿಗೆ ವಂದಿಸಿ
ಕರದ ಪುಷ್ಪಾಂಜಲಿಯ ಬಿನ್ನೈಸಿದನು ವಿನಯದಲಿ
ಅರಸನನುಜರು ನೀವು ನಿಮ್ಮಯ
ಚರಣ ದರುಶನವಾಯ್ತು ನಮಗೇ
ನರಿದು ಲೋಕದೊಳೆಂದು ಕೊಂಡಾಡಿದನು ಮನದಣಿಯೆ || ೯೫ ||

ಜನಕಸುತೆ ಹರುಷದಲಿ ಸುಗ್ರೀ
ವನ ಸತಿಯರೊಡನಿರ್ದ ಮಾವನ
ವನಿತೆಯರಿಗಭಿನಮಿಸೆ ಸೊಸೆಯುಳ ತೆಗೆದು ತಕ್ಕೈಸಿ
ಬನದೊಳಗೆ ಬಲುನೊಂದಲಾ ಮಾ
ನಿನಿಯೆ ಬಾರೌ ತಾಯೆ ಬಾರೆಂ
ದೆನುತ ಕಂಬನಿದೊಡೆದು ಲಾಲಿಸಿದರು ಮಹಾಸತಿಯ || ೯೬ ||

ತರಿಸಿ ಮಣಿಭೂಷಣ ದುಕೂಲವ
ಧರಣಿ ತನುಜೆಗೆ ತೊಡಿಸಿ ಭರತನು
ತರಣಿಸುತ ಜಾಂಬವ ವಿಭೀಷಣರುಗಳ ಸತ್ಕರಿಸಿ
ಪುರಕೆ ಪಯಣವ ಮಾಡಿದನು ಡಂ
ಗುರದ ಸನ್ನೆಯೊಳಂದು ಹೊರವಂ
ಟರು ಮಹಾಂಬುಧಿ ತೆರಳುವಂತೆ ಸಮುದ್ರ ಘೋಷದಲಿ || ೯೭ ||

ಮುಸಗಿದುದು ಕೆಂದೂಳಿ ಗಗನವ
ಮುಸುಕಿದರೆ ರವಿ ಧಾತುಗುಂದಿದ
ಪಸರಿಸಿತುದೆಣ್ದೆಸೆಯ ನೀಂಟಿತು ಸಪ್ತ ಸಾಗರವ
ಉಸುರು ತಗೆಬಗೆಯಾಯ್ತು ಕೂರುಮ
ನಸಿದನಹಿಪತಿ ಬಲದ ಭಾರದಿ
ಬೆಸುಗೆಬಿಡೆ ಗಿರಿ ವಾದ್ಯತತಿ ಘರ್ಜಿಸಿತು ಮೂಜಗವ || ೯೮ ||

ಅರಸ ಕೇಳಲ್ಲಿಂದಯೋಧ್ಯಾ
ಪುರಿಗೆ ಬಂದನು ರಾಮ ನೃಪತ
ನ್ನರಸಿ ಲಕ್ಷ್ಮಣ ಭರತ ಶತ್ರುಘ್ನಾದಿ ಬಾಂಧವರ

ಪುಷ್ಪಾಂಜಲಿ=ಹೂವಿನ ಬೊಗಸೆ. ಏನರಿದು=ಏನಸಾಧ್ಯ. ಭೂಷಣ=ಅಲಂಕಾರ. ದುಕೂಲ=ರೇಷ್ಮೆ ಬಟ್ಟೆ. ಘೋಷ=ಕೋಲಾಹಲ. ಧಾತುಗುಂದು=ಧೈರ ಗೆಡು, ಪಸರಿಸು=ಹರಡು. ಎಣ್ದೆಸೆ=ಎಂಟು ದಿಕ್ಕು. ಈಂಟು=ಕುಡಿ. ಸಪ್ತಸಾಗರ=ಲವಣ, ಇಕ್ಷು, ಸುರಾ, ಘೃತ, ದಧಿ, ದುಗ್ಧ, ಜಲಸಮುದ್ರಗಳು. ತಗೆಬಗೆ=ಹಿಂಸೆ, ಕಷ್ಟ, ಶ್ರಮ. ಕೂರುಮ=ಆಮೆ. ಆಸಿದನ್=ಸಣ್ಣಗಾದನು. ಅಹಿಪತಿ=ಆದಿಶೇಷ.

ಪರುಠವಣೆಯಲಿ ರಾಜತೇಜದಿ
ಸುರರು ದುಂದುಭಿ ಮೊಳಗೆ ನಿಜವಂ
ದಿರದ ಬಾಗಿಲ ಬಳಿಯ ನಿಂದನು ಮುನಿಪರೊಗ್ಗಿನಲಿ ॥ ೯೯ ॥

ಅನಿಮಿಷರು ಸಂದಣಿಸೆ ಅಭ್ರದಿ
ಹನುಮನಾಕ್ಷಣ ಬಂದು ಕೈಲಾ
ಗಿನಲಿ ಪಾಯವಧಾನ ಚಿತ್ತವಧಾನವೆಚ್ಚರಿಕೆ
ಎನಲು ರಥದಿಂದಿಳಿದು ರಘು ನಂ
ದನನು ಹೊಕ್ಕನು ರಾಜಭವನವ
ತನತನಗೆ ಪುರಜನರು ಕಾಣಿಕೆಗೊಟ್ಟು ನಮಿಸಿದರು ॥ ೧೦೦ ॥

ಗುರು ವಸಿಷ್ಠನ ಮತದಿ ತಮ್ಮಂ
ದಿರು ಸಹಿತ ಮಜ್ಜನವ ಮಾಡಿದ
ನರಸ ದಿವ್ಯಸುಗಂಧ ಮಾಲ್ಯಾಂಬರ ಸುಭೂಷಣವ
ಧರಿಸಿದರು ನಾಲ್ವರು ಕುಮಾರರು
ಹರುಷಮಿಗೆ ನಿಜಜನನಿಯರು ಮೂ
ವರಿಗೆ ವಂದಿಸಿ ಮೆರೆದರಗ್ಗದ ರಾಜತೇಜದಲಿ ॥ ೧೦೧ ॥

ಓಲಗಕೆ ನಡೆತಂದು ರಾಮನೃ
ಪಾಲನನುಜರು ಸಹಿತ ಮಂತ್ರೀ
ಜಾಲ ಬಾಂಧವ ಸಹಿತ ತಿರೆಯ ಸಮಸ್ತ ಧರಣಿಪರು
ಓಲಗದಿ ಮುನಿ ಮುಖ್ಯರೆಲ್ಲರು
ಲೀಲೆಯಿಂ ಕುಳ್ಳಿರೆ ಸುಮಂತ್ರನು
ಕೋಲಗುರುವಿಗೆ ನಮಿಸಿಯಾಲೋಚಿಸಿದನೀ ಹದನ ॥ ೧೦೨ ॥

ವರನೃಪಾಲಗೆ ರಾಜಪಟ್ಟವ
ಧರಿಸಬಹುದೇ ಜೀಯಯನೆ ಭೂ
ಸುರರ ಬರಹೇಳೆನುತ ತರಿಸಿದರಖಿಳ ವಸ್ತುಗಳ

ಪರುಠವಣೆ=ವಿಶೇಷ. ಅನಿಮಿಷರು=ದೇವತೆಗಳು. ಅಭ್ರ=ಆಕಾಶ. ಕೈಲಾಗಿನಲಿ=ಕೈಕುಲುಕಿ. ಪಾಯವಧಾನ=ಪಾದ ಬೆಳೆಸಿ. ಚಿತ್ತವಧಾನ=ಲಾಲಿಸಿ. ಅಗ್ಗದ=ಅತಿಶಯವಾದ. ಕೋಲ ಗುರು=ಬಿಲ್ವಿದ್ಯೆಯ ಗುರು.

ತರಿಸಿ ಕವಳವನುಭಯರಿಗೆ ಕರ
ಕರೆಸಿ ಕೊಡಿಸಿದನಾ ಸುಮಂತನು
ಪುರವ ಸಲೆ ಶೃಂಗರಿಸೆ ಪರಿಚಾರರಿಗೆ ನೇಮಿಸಿದ || ೧೦೩ ||

ವಾರಣದ ಬೀದಿಗಳ ಘನ ಶೃಂ
ಗಾರದಿಂ ನವರತ್ನ ಜಲ್ಲಿಯ
ತೋರಣದ ಮಂಟಪದ ಸಿರಿಯಲಿ ಮೇಲು ಕಟ್ಟುಗಳ
ಕಾರಳಿಯ ಕುಂಕುಮದ ನವ ಪ
ನ್ನೀರ ಚಳೆಯದ ಕತ್ತುರಿಯ ಮತ
ಸಾರಳಿಯ ರಚನೆಯಲಿ ಶೃಂಗರಿಸಿದರು ಪಟ್ಟಣವ || ೧೦೪ ||

ಬರಸಿದರು ವಾಲೆಗಳ ದಿಕ್ಕಿನ
ಅರಸುಗಳ ಬರಹೇಳಿ ಮುನಿ ಮು
ಖ್ಯರನು ಬಂದರು ಅವನಿಪಾಲಕರತುಳ ಬಲಸಹಿತ
ತರುಣಿಯರು ಶೃಂಗರಿಸಿದರು ಪರಿ
ಪರಿಯ ದಿವ್ಯದುಕೂಲ ವಸ್ತ್ರಾ
ಭರಣ ಭೂಷಿತರಾಗಿ ಪಿಡಿದರು ಕಲಶಕನ್ನಡಿಯ || ೧೦೫ ||

ಹರುಷದಲಿ ತಂತಮ್ಮ ಕೈಯಲಿ
ಪರಮ ಪುಣ್ಯಸುವಸ್ತುಗಳ ತಂ
ದಿರಿಸಿದರು ಹರುಷದಲಿ ನೆರೆದುದು ಬಹುಳ ಸಂಖ್ಯೆಯಲಿ
ಶರಧಿ ಮೇರುದಿಗಂತದವನೀ
ಶ್ವರರು ಯಾಚಕ ಪಂಡಿತರು ಕವಿ
ವರರು ಗಾಯಕ ಮಲ್ಲ ದೈವಜ್ಞರು ಸುನರ್ತಕರು || ೧೦೬ ||

ಬಂದರತಿ ಬೇಗದಲಿ ವರತೃಣ
ಬಿಂದು ಮುನಿ ದಮನಾಖ್ಯ ಸನಕಸ
ನಂದ ಶೌನಕ ಸೂತ ಶತಮುಖ ಸುಮತಿ ಜಾಬಾಲಿ

ಕವಳ=ವೀಳೆಯ. ವಾರಣ=ಆನೆ. ಕಾರಳಿ=ಕಾರಣಿ. ಚಳೆಯ=ಚಿಮುಕಿಸುಪಿಕೆ. ಕತ್ತುರಿ=ಕಸ್ತೂರಿ. ಮತ=? ಸಾರಳಿ=ಸಾರಣಿ. ವಾಲೆ=ಪತ್ರ. ದೈವಜ್ಞ=ಜೋಯಿಸ.

ಸಂದ ದಾಲ್ಭ್ಯ ಮರೀಚಿ ಲೋಗಾ
ನಂದ ಸುರಗುರು ರೋಮಜನು ಮುಚು
ಕುಂದ ನಾರದರಖಿಳ ತಪಸಿಗಳೈದಿತೊಗ್ಗಿನಲಿ || ೧೦೭ ||

ಅತ್ರಿ ಭಾರದ್ವಾಜ ವಿಶ್ವಾ
ಮಿತ್ರ ಗೌತಮ ವಾಮದೇವನ
ಗಸ್ತ್ಯ ಕಣ್ವಾಂಗಿರಸ ಮಾರ್ಕಂಡೇಯ ಮೈತ್ರೇಯ
ಸತ್ಯತಪ ಕೌಂಡಿನ್ಯ ಕೌಶಿಕ
ಪುತ್ರ ಶುಕ ವಾಲ್ಮೀಕಿಯಾ ಮುನಿ
ಪೋತ್ತಮರು ಸಂದಣಿಸಿದರು ರಘುನೃಪನ ಸಭೆಯೊಳಗೆ || ೧೦೮ ||

ಚ್ಯವನ ಜನ್ಹು ಮೃಕಂಡು ಮುನಿಗಾ
ಲವ ಶತಾನಂದೈಕ ನಾರದ
ಶ್ರವತಿ ಕಶ್ಯಪ ಕಪಿಲ ಶೌನಕ ಶನಕ ಜಮದಗ್ನಿ
ಪವನ ಭಕ್ಷಣ ಗಾರ್ಗ್ಯಋಷಿ ಭಾ
ರ್ಗವ ಸನುತ್ಸುತ ನಂದ ಜಯಮುನಿ
ನಿವಹದೊಡನೈತಂದನಾ ದೂರ್ವಾಸನೊಲವಿನಲಿ || ೧೦೯ ||

ಚೋಳ ಗುಜ್ಜರ ದ್ರವಿಡ ವಂಗ ವ
ರಾಳ ಚೋಟಕ ಸಿಂದು ಶಿಬ ನೇ
ಪಾಳ ಪಾಂಡ್ಯ ಮರಾಟ ಸಿಂಹಳ ಹೂಣ ಸವ್ವೀರ
ಲಾಳ ಮಗಧ ವಿದರ್ಭ ರುತು ಮಲೆ
ಯಾಳ ನಿಷಧ ಕಳಿಂಗವರ ಪಾಂ
ಚಾಳ ಬಹುದೇಶಾಧಿಪತಿಗಳು ಬಂದರೊಗ್ಗಿನಲಿ || ೧೧೦ ||

ಮಾಳವಾಂಧ್ರಾಕರುಷವರ ನೇ
ಪಾಳ ಬರ್ಬರ ಮತ್ಸ್ಯನೃಪ ಬಂ
ಗಾಳಮಾಂಧ್ರ ಮರಾಟ ಕೋಸಲ ಕೊಡಗ ಕರ್ನಾಟ
ಗೌಳ ಕುಂತಳ ಕೃಕರ ಪತಿ ಬ
ಲ್ಲಾಳ ಕೊಂಕಣ ಚೀನ ಕೈಕೆಯ
ರಾಳ ಮೇಳದಿ ಬಂದು ಹೊಕ್ಕರು ನೃಪನ ವರಸಭೆಯ || ೧೧೧ ||

ಪವನ=ಗಾಳಿ. ನಿವಹ=ಸಮೂಹ. ಗುಜ್ಜರ=ಗುಜರಾಥಿನವ. ವರಾಳ=ವರಾಡದವನು. ಚೋಟಕ=ಪ್ರದೇಶವಾಚಕ. ಹೂಣ=ಯೂರೋಪಿನವ. ಸವ್ವೀರ=ಪ್ರದೇಶವಾಚಕ. ಲಾಳ=ಲಾಟದೇಶದವನು. ರುತು=?. ಕಳಿಂಗ=ಒರಿಸ್ಸದ ಭಾಗ. ಕರುಷ=ಪ್ರದೇಶ ವಾಚಕ. ಗೌಳ=ಗೌಡದೇಶದವನು. ಕೃಕರ=?. ಅಳಮೇಳ=ಪರಿವಾರ ಸಮೇತ.

ಕೇರಳಾಧಿಪ ಬಾಹ್ಲಿಕನು ಹ
ಮ್ಮೀರ ಚೈದ್ಯ ಕುರುಶ್ವಪತಿ (?) ಗಾಂ
ಧಾರ ಸಂಬಳ ತುಳುವ ನೃಪ ಕಾಶ್ಮೀರ ಸೌರಾಷ್ಟ್ರ
ಸೂರಸೇನ ನವ ಪ್ರಚೀನ ಸು
ಪಾರಿಯಾತ್ರ ಕರೂಷಚಿಥ ವರ
ಭೂರಮಣರೈತಂದರತುಳಮನೋನುರಾಗದಲಿ || ೧೧೨ ||

ಅಕುಟಿಲನೆ ಕೇಳ್ ಪಾಂಡವಾಗ್ರಜ
ಮುಕುರವದನೆಯರುತ್ಸವದಿ ಜಾ
ನಕಿಯಲಂಕರಿಸಿದರು ಮಾಲ್ಯಾಂಬರದಿ ಸಿರಿಮುಡಿಯು
ಸಕಲ ವೈಭವದಿಂದೆ ವೈಮಾ
ನಿಕರು ಕೈವಾರಿಸಲು ಗಗನ
ಸಖಿಯರ ನಡುವೆ ಮೃಗಾಕ್ಷಿ ಬಂದಳು ನೃಪನ ಗದ್ದುಗೆಗೆ || ೧೧೩ ||

ಭರತ ಭಾರಿಯು ಸತ್ತಿಗೆಯ ಚಾ
ಮರವ ಲಕ್ಷ್ಮಣ ದೇವ ಚಿಮ್ಮಲು
ಧರಿಸಿದನು ಶತ್ರುಘ್ನ ಗಿಂಡಿಯು ಹೆಗಲ ಹಡಪದಲಿ
ಮರುತಸುತ ಸೇವಿಸಲು ಚರಣದಿ
ಗುರು ವಸಿಷ್ಠನ ಸಮ್ಮುಖದಿ ರಘು
ವರನು ನಿಜಸತಿಸಹಿತ ಸಿಂಹಾಸನದಿ ರಂಜಿಸಿದ || ೧೧೪ ||

ವರ ವಿಭೀಷಣ ಜಾಂಬವಂತರು
ತರಣಿಸುತ ನಳ ನೀಲನಂಗದ
ಶರಭ ಶತಬಲಿ ಗವಯ ವೀರಗವಾಕ್ಷ ಮೊದಲಾದ
ಧುರವಿಜಯರೆಡವಂಕದಲಿ ನಿಂ
ದಿರಲು ಬಲದಲಿ ಸಿದ್ಧ ವಿದ್ಯಾ
ಧರರು ನೆರೆದರನೇಕ ವಿದ್ವಾಂಸರು ಕವೀಶ್ವರರು || ೧೧೫ ||

ಮೇಲು ಮಣಿಗಳ ರತ್ನ ಕಾಂತಿಯು
ಮೌಳಿಗಳ ಮನ್ನೆಯರು ಮಂತ್ರೀ
ಜಾಲ ಸಹಿತಿದಿರಿನಲಿ ನಿಂದುದು ಮಕುಟವರ್ಧನರು

ಬಾಹ್ಲಿಕ=ಪಂಜಾಬಿನ ಬಳಿಯವನು. ಹಮ್ಮೀರ=ದೇಶವಾಚಿ. ಚೈದ್ಯ=ಚೇದಿದೇಶ. ಕುರುಶ್ವ=ದೇಶವಾಚಿ. ಗಾಂಧಾರ=ಸಿಂಧೂನದಿಯ ತಡಿಯ ದೇಶ. ಸುಪಾರಿ ಯಾತ್ರ=ದೇಶವಾಚಿ. ಕರೂಷ=ದೇಶವಾಚಿ. ಮುಕುರವದನೆ=ಕನ್ನಡಿಯಂಥ ಮುಖವುಳ್ಳವಳು. ಮಾಲ್ಯ=ಹೂವಿನ ಹಾರ. ಅಂಬರ=ಬಟ್ಟೆ. ಗದ್ದುಗೆ=ಸಿಂಹಾಸನ. ಮೃಗಾಕ್ಷಿ=ಜಿಂಕೆಯ ಕಣ್ಣುಳ್ಳವಳು. ಹಡಪ=ಚೀಲ. ಧುರ=ರಣವೀರ. ಮನ್ನೆಯರು=ನಾಯಕರು. ಮಕುಟವರ್ಧನರು=ಕಿರೀಟಧರಿಸಿದ ಚಕ್ರವರ್ತಿಗಳು.

ಓಲಗದಿ ಮಿಗೆ ವಾರಸತಿಯರು
ಓಲಗಿಸಿ ರಘುನೃಪನನಾಗಳೆ
ತಾಳ ಮದ್ದಳೆ ಭೇರಿಡೆಂಕ ನಿನಾದ ರಂಜಿಸಿತು ॥ ೧೧೬ ॥

ಅಲ್ಲಿ ನೆರೆದ ಮುನೀಶರೆಲ್ಲರು
ಬಲ್ಲ ಭೂಸುರನಿವಹ ಮಂತ್ರಿಗ
ಳಲ್ಲಿ ಸುಮುಹೂರ್ತದಲಿ ಪಟ್ಟವ ಕಟ್ಟಿದರು ನೃಪಗೆ
ಸಲ್ಲಲಿತ ಸತ್ಕೀರ್ತಿ ವಧು ವರ
ನಲ್ಲಿ ನಿಲ್ಲದೆ ಬಂದು ಸೀತಾ
ವಲ್ಲಭನ ವೊಂದಿದಳು ಕುಂತೀಸೂನು ಕೇಳೆಂದ ॥ ೧೧೭ ॥

ಗುರು ವಸಿಷ್ಠ ಮುನೀಂದ್ರ ಭೂಮೀ
ಸುರರೊಡನೆ ತಾ ಬಂದು ರಾಮನ
ಹರಸಿ ಮಂತ್ರಾಕ್ಷತೆಯ ತಳಿದರು ದೇವನಂಗದಲಿ
ಸುರರು ದುಂದುಭಿ ವೊಳಗೆ ಹೂವಿನ
ಅರಳ ಸುರಿದರು ನಿರ್ಜರರು ಧರೆ
ಯರಸುಗಳು ಕೈಮುಗಿದು ಮುಯಿಗಳನಿತ್ತರವನಿಪಗೆ ॥ ೧೧೮ ॥

ಮುನಿಸತಿಯರೊಡನೈದಿ ಭೂಸುರ
ವನಿತೆಯರು ಶೋಭನದ ಧವಳವ
ವಿನಯದಲಿ ಪಾಡಿದರು ಜಯ ಜಯರವನಿನಾದದಲಿ
ಕನಕರತ್ನದ ನೂಪುರದ ಕಾ
ಮಿನಿಯ ರೊಯ್ಯಾರದಲಿ ರಘುನಂ
ದನನ ಹರಸುತಲೆತ್ತಿದರು ನವರತ್ನದಾರತಿಯ ॥ ೧೧೯ ॥

ಆರು ಹೊಗಳುವಡರಿದು ಸಭೆಯಲಿ
ಸಾರ ಸಂಗೀತದ ವಿನೋದದಿ
ವಾರಕಾಂತಾಜನದಲೊಪ್ಪುವ ಕೇಳಮೇಳವದ

ವಾರಸತಿ=ಸೂಳೆ. ಓಲಗಿಸಿ=ಸೇವಿಸಲು. ಡೆಂಕ=ಡೋಲು. ಕುಂತೀಸೂನು=ಧರ್ಮರಾಯ. ನಿರ್ಜರ=ದೇವತೆ. ಮುಯಿ=ಕಾಣಿಕೆ. ಧವಳ=ಧವಳವೆಂಬ ಹಾಡು. ನೂಪುರ=ಕಾಲ್ಕಡಗ, ವಾರಕಾಂತಾಜನ=ಸೂಳೆಯರು. ಕೇಳಮೇಳ=ಸರಸಸಲ್ಲಾಪ.

ಚಾರು ಗೀತನೃತ್ಯಗಳ ಸೇವಾ*
ಗಾರಿಕೆಯನೇನೆಂಬೆನೈ ಜಂ
ಭಾರಿವೋಲಗದಂತೆ ಮೆರೆದುದು ನೃಪತಿಯಾಸ್ಥಾನ || ೧೨೦ ||

ಕರದು ಯಾಚಕ ಪಂಡಿತ ಭೂ
ಸುರರ ಗಾಯಕಮಲ್ಲರನು ಕವಿ
ವರರಿಗಿತ್ತನು ಧೇನು ಕನಕಾಂಬರ ಸುವಸ್ತುಗಳ
ಅರಸುಗಳಿಗಾದರಿಸಿ ಕೊಟ್ಟನು
ಕರಿತುರಗ ರಥ ದಿವ್ಯಹೇಮಾಂ
ಬರ ಸುವಸ್ತುಗಳಿಂದ ಕಳುಹಿದನಾ ವಸಿಷ್ಠಮುನಿ || ೧೨೧ ||

ಕೊಟ್ಟ ಸುಮುಹೂರ್ತದೊಳಗಾಗ ವ
ಶಿಷ್ಠ ಗುರುವಿಂಗೆರಗಿ ರಘುವರ
ನೆಟ್ಟನೈತಂದಲ್ಲಿ ಹೊಕ್ಕನು ರಾಜಮಂದಿರವ
ಸೃಷ್ಟಿಗಧಿಪನ ಕೀರ್ತಿವಧು ಘನ
ನಿಷ್ಠೆಯಲಿ ಧಾವಳ್ಯವಸನವ
ನುಟ್ಟು ನಲಿದಾಡಿದಳು ತ್ರಿಜಗದ ಜನದ ಜಿಹ್ವೆಯಲಿ || ೧೨೨ ||

ಅರಸ ಕೇಳ್ಮರುದಿವಸದಲಿ ರಘು
ವರನು ತನ್ನೋಲಗಕೆ ನೃಪರನು
ಕರೆಸಿದನು ನಿಜಮಂತ್ರಿ ಬಾಂಧವಜಾಲವರ್ಗವನು
ತರಣಿಸುತ ಜಾಂಬವ ವಿಭೀಷಣ
ರಿರದೆ ಬಂದರು ಕೈಮುಗಿದು ಕು
ಳ್ಳಿರಲು ಪರಿತೋಷದಲಿ ನುಡಿದನು ರಾಮ ನಸುನಗುತ || ೧೨೩ ||

ಕೇಳು ಲಕ್ಷ್ಮಣ ಕೇಳು ಜಾಂಬವ
ಕೇಳು ನಳ ನೀಲಾದಿ ಸುಭಟರು
ಕೇಳಿರೈ ನರೆದಲಗವ್ರಿಹಿಯರು ಸೆರೆಯೊಳಿರ್ದವರ

* ಇಲ್ಲಿ ಛಂದಸ್ಸು ಹೊಂದುವುದಿಲ್ಲ.

ಜಂಭಾರಿ=ದೇವೇಂದ್ರ. ಧೇನು=ಹಸು. ಕೀರ್ತಿವಧು=ಕೀರ್ತಿಯೆಂಬ ಸ್ತ್ರೀ. ಧಾವಳ್ಯವಸನ=ಬಿಳಿಯ ಬಟ್ಟೆ. ಜಿಹ್ವೆ=ನಾಲಗೆ. ಪರಿತೋಷ=ಸಂತೋಷ.

ಕಾಲ ಸವೆದುದು ದಿವಸವಿಂದಿಗೆ
ಏಳು ತಿಂಗಳು ಕಳೆದರವದಿರ
ಪಾಲಿಸಲು ಬೇಗನಿಲಸುತ ನೀ ಕರೆದು ತಾರೆಂದ || ೧೨೪ ||

ಹೈ ಹಸಾದವೆನುತ್ತ ವಂದಿಸೆ
ಬಾಹುಬಲದಗ್ಗಳಿಕೆವಿಗೆ ನಿ
ರ್ವಾಹದಲಿ ಹೊರವಂಟನತಿ ವೇಗದಲಿ ಪಥವಿಡಿದು
ಸಾಹಸವನೇನೆಂಬೆ ವಜ್ರದ
ದೇಹನಲ್ಲಾ ಹನುಮ ತನ್ನ ಮ
ನೋಹರದ ರುಷಿಗಳನು ಕಂಡನು ಪಂಚನಂದಿಯಲಿ || ೧೨೫ ||

ಅವರ ಪಾದಾಂಬುಜಕೆ ವಂದಿಸಿ
ಪವನಸುತ ಬಿನ್ನೈಸಿದನು ರಾ
ಘವ ನೃಪಾಲನು ಕಳುಹೆ ಬಂದೆನು ನಿಮ್ಮ ದರುಶನಕೆ
ಅವಧಿ ಸವೆದುದು ಸೆರೆಮನೆಯೊಳಿ
ರ್ದವರನೊಡಗೊಂಡೀಕ್ಷಣವೆ ನೀ
ವವನಿಪನ ಸಂಮುಖಕೆ ಚಿತ್ತೈಸೆಂದು ಕೈಮುಗಿದ || ೧೨೬ ||

ಹನುಮನಾಡಿದ ನುಡಿಗೆ ಗೌತಮ
ಮುನಿಪ ನಸುನಗುತೆದ್ದು ಬನದಲಿ
ಘನತಪೋಬಲ ಮಹಿಮರನು ಕರೆಸಿದನತುಳವೇಗದಲಿ
ಮನದಿ ಹರುಷಿತನಾಗಿ ಮುನಿ ಸೆರೆ
ಮನೆಯ ಪ್ರತಿವಾದಿಗಳನೊಡಗೊಂ
ಡನುಪಮಿತ ಗುಣನಿಲಯ ಮುನಿ ಹೊರವಂಟನಾಶ್ರಮವ || ೧೨೭ ||

ಬಂದನತಿಹರುಷದಲಿ ಮುನಿಕುಲ
ವೃಂದದೊಡನೈತರಲು ರಘುಕುಲ
ನಂದು ಬಿಜಯಂಗೈಸೆ ತಂದನು ರಾಜಮಂದಿರಕೆ

ಹಸಾದ=ಅಪ್ಪಣೆ. ಅಗ್ಗಳಿಕೆ=ದೊಡ್ಡಸ್ತಿಕೆ. ನಿರ್ವಾಹ=ಉಪಾಯ, ಸರಾಗ. ಅನುಪಮಿತ=ಎಣೆಯಿಲ್ಲದ.

ಬಂದರೇ ಪ್ರತಿವಾದಿಗಳು ಕರ
ತೆಂದಿರೇ ನೀವೆನುತ ಮುನಿಕುಲ
ವೃಂದವನು ಸತ್ಕರಿಸಿ ಕುಳ್ಳಿರಿಸಿದನು ಗೌತಮನ || ೧೨೮ ||

ಇವರ ವ್ಯವಹಾರವನು ಪರಿಹರಿ
ಸುವ ವಿಚಾರವ ನೋಡಿ ಮನದಲಿ
ರವಿಕುಲಾನ್ವಯ ರಾಮ ನೆನೆದನು ಹೃದಯ ಶುದ್ಧಿಯಲಿ
ಶಿವನ ಧ್ಯಾನಿಸಲಾ ಕ್ಷಣವೆ ತ್ರೈ
ಭುವನಕರ್ತರು ಇಂದ್ರ ಮೊದಲಾ
ದವರು ಬಂದರಯೋಧ್ಯಪುರಪತಿಧಾಮನೋಲಗಕೆ || ೧೨೯ ||

ವಸುಗಳಮರರು ಭುಜಂಗಾಮರ
ರಸುರ ಕಿನ್ನರ ಯಕ್ಷ ರಾಕ್ಷಸ
ಶಶಿರವಿಗಳಾದಿತ್ಯ ವಿದ್ಯಾಧರರು ಗುಹ್ಯಕರು
ವಸುಧೆಯಮರರು ಕ್ಷತ್ರಿಯರು ಜೋ
ಯಿಸರು ವೈಶ್ಯ ಚತುರ್ಥರುನ್ನತ
ಕುಶಲ ವಿದ್ಯಾಧಿಕರು ನೆರೆದುದು ನೃಪನ ಸಭೆಯೊಳಗೆ || ೧೩೦ ||

ಇಂತೆಸೆವನಾ ಸಭೆಯೊಳಗೆ ಮತಿ
ವಂತ ನುಡಿದನು ಧಾನ್ಯವರ್ಗದ
ಸಂತತಿಯ ಬರಹೇಳಿಯೆನೆ ಸೆರೆಮನೆಯೊಳಿರ್ದವರು
ನಿಂತು ಕರಗಳ ಮುಗಿದು ಧರಣೀ
ಕಾಂತ ರಘುವರನೀ ಸುಬುದ್ಧಿಯ
ನೆಂತು ನಮಗರುಹುವಿರಿಯದ ಪೇಳೆಂದ ನರೆದಲಗ || ೧೩೧ ||

ಎನಲು ರಾಮನೃಪಾಲ ನೋಡಿದ
ಘನ ತಪೋಮಹಿಮರಿಗೆ ನುಡಿದನು
ಮನವ ವಂಚಿಸಲಾಗದೀ ಧರ್ಮವನು ನೆರೆತಿಳಿದು

ಧಾಮ=ಮನೆ. ಆಶ್ರಯ. ವಸು=ದೇವತೆಗಳು; ಇವರು ಎಂಟು ಮಂದಿ; ಆಪ, ಧ್ರುವ. ಸೋಮ. ಧವ, ಅನಿಲ, ಅನಲ, ಪ್ರತ್ಯುಕ್ಷ. ಪ್ರಭಾಸ. ಭುಜಂಗ=ನಾಗರ. ಆದಿತ್ಯ=ಅದಿತಿಯ ಮಕ್ಕಳು. ಗುಹ್ಯಕ=ಕುಬೇರನ ಕಡೆಯವರು. ಚತುರ್ಥರು=ಶೂದ್ರರು. ಎಸೆ=ಶೋಭಿಸು.

ಅನುನಯದಿ ಪೇಳಿನೆ ಮುನೀಂದ್ರರು
ಅನಿಮಿಷರನೀಕ್ಷಿಸಿದರಲ್ಲಿಯ
ಘನ ಮಹಾಸಭೆಯೊಳಗೆ ಭಾರ್ಗವ ರಾಮನಿಂತೆಂದ || ೧೩೨ ||

ಆರು ನುಡಿಯರಿ ನೀವು ಹಿರಿಯರು
ಮಿರಿಸುವರಾರಿವರೊಳಗೆ ಗುಣ
ಸಾರಸಾವನು ಪೇಳಿನಲು ಜಂಭಾರಿ ನಸುನಗುತ
ಸಾರಹೃದಯನು ನರೆದಲಗ ನಿ
ಸ್ಸಾರನೀ ವ್ರಿಹಿಯೆನಲು ಗುಣನಿಧಿ
ಮಾರುತಾತ್ಮಜ ನೋಡಿದನು ಸನ್ನೆಯಲಿ ನಾರದನ || ೧೩೩ ||

ಅಹುದು ಸುರಪನ ಮಾತು ನಿಶ್ಚಯ
ವಹುದು ನರೆದಲೆಗನೆ ಸಮರ್ಥನು
ಬಹಳ ಬಲಯುತ ನೆರೆಗೆ ತಳ್ಳಲು ಕಾಂತಿಗೆಡಲಿಲ್ಲ
ಸಹಜವಿದು ಪರಪಕ್ಷವಾದಡೆ
ವ್ರಿಹಿ ಕರಗಿ ಕಂದಿದನು ನೆರೆಯಲಿ
ವಿಹಿತವದು ಕೇಳೆಂದು ನಾರದ ನುಡಿದ ನಸುನಗುತ || ೧೩೪ ||

ಎಲ್ಲ ನವಧಾನ್ಯದಲಿ ಈತನೆ
ಬಲ್ಲಿದನು ಹುಸಿಯಲ್ಲ ಬಡವರ
ಬಲ್ಲಿದರನಾರೈದು ಸಲಹುವನಿವಗೆ ಸರಿಯುಂಟೆ
ನೆಲ್ಲಿನಲಿ ಗುಣವೇನು ಭಾಗ್ಯದಿ
ಬಲ್ಲಿದರ ಪತಿಕರಿಸುವನು ಅವ
ನಲ್ಲಿ ಸಾರವ ಕಾಣೆಯೆಂದನು ಕಪಿಲಮುನಿ ನಗುತ || ೧೩೫ ||

ಸುರಮುನಿಗಳಿಂತೆನಲು ಭೂಸುರ
ವರರು ಸಂತೋಷಿಸಲು ಸಭಿಕರು
ನರೆದಲಗ ನೀ ಬಾರೆನುತ ರಾಮನೃಪಾಲ ನೆರೆಮೆಚ್ಚಿ

ಅನುನಯ=ಸ್ನೇಹ. ಅನಿಮಿಷರು=ದೇವತೆಗಳು. ಭಾರ್ಗವರಾಮ=ಪರಶುರಾಮ.
ಮಾರುತಾತ್ಮಜ=ಆಂಜನೇಯ. ಸುರಪ=ಇಂದ್ರ. ವಿಹಿತ=ಯೋಗ್ಯ.

ಕರೆದುಕೊಟ್ಟನು ತನ್ನ ನಾಮವ
ಧರೆಗೆ ರಾಘವನೆಂಬ ಪೆಸರಾ
ಯ್ತಿರದೆ ವ್ರಿಹಿ ನಾಚಿದನು ಸಭೆಯಲಿ ಶಿರವ ಬಾಗಿಸಿದ || ೧೩೬ ||

ಹರುಷದೋರಿದ ಮನದಿ ನಲಿವುತ
ನರೆದಲಗನ್ನೈ ತಂದು ರಾಮನ
ಸಿರಿಚರಣಕಭಿನಮಿಸೆ ದೇವಾಸುರರು ಕೊಂಡಾಡೆ
ಹರಸಿ ಮುತ್ತಿನ ಸೇಸೆಯನು ಭೂ
ಸುರರು ಮಂತ್ರಾಕ್ಷತೆಯನಿತ್ತುಪ
ಚರಿಸಿದರು ರಾಗಿಯನು ಪೊಗಳಿದರಲ್ಲಿ ಮುನಿವರರು || ೧೩೭ ||

ಸರಸಿಜೋದ್ಭವ ಮೆಚ್ಚಿಕೊಟ್ಟನು
ಕರಕಮಂಡಲ ಪಾತ್ರೆಯನು ಶಂ
ಕರ ತ್ರಿಶೂಲವನಿತ್ತ ಕೊಟ್ಟನು ಕಾಲ ದಂಡವನು
ನಾರದನು ಚಕ್ರವನು ಕೊಟ್ಟನು
ಉರುತರದ ಕೂರಿಗೆಯ ವಾಸವ
ನುರಗಪತಿ ವಾಸುಗಿಗಳಿತ್ತರು ನೇಣು ಪಾಶಗಳ || ೧೩೮ ||

ಧನದನಿತ್ತನು ಯಂತ್ರರಕ್ಷೆಯ
ಬನದೊಳಿಹ ಮೂಲಿಕೆಯ ಮುತ್ರವ
ವಿನಯದಿಂದ ವಿಭೂತಿಯನು ವರಕಾಲಭೈರವನು
ಇನಶಶಿಗಳಾದರಿಸಿ ಕೊಟ್ಟರು
ಘನತರದ ಜಲ್ಲರಿಯ ವರುಣನು
ಕನಕಮಣಿನಿರ್ಮಿತದ ಕರಗವನಿತ್ತು ಮನವೊಲಿದು || ೧೩೯ ||

ಕರಸಿದಳು ಶರ್ವಾಣಿ ತನ್ನಯ
ಮರುಳು ಬಳಗವನೆಲ್ಲ ನೀವೀ
ಧರಣಿಯಲಿ ಸತಿರೂಪತಾಳ್ದಗಣಿತದ ಮನೆಗಳಲಿ

ಸರಸಿಜೋದ್ಭವ=ಬ್ರಹ್ಮ. ಉರುತರ=ಶ್ರೇಷ್ಠ. ವಾಸವ=ಇಂದ್ರ. ಉರಗಪತಿ=ಸರ್ಪರಾಜ. ನೇಣುಪಾಶಗಳ=ಕೊರಳಕಣ್ಣಿ ಮತ್ತು ಹಗ್ಗ. ಧನದ=ಕುಬೇರ. ಜಲ್ಲರಿ=ಜರಡಿ. ಜಾಲರಿ. ಶರ್ವಾಣಿ=ಪಾರ್ವತಿ. ಮರುಳು ಬಳಗ=ಭೂತಗಣ.

ಹುರುಳುಗೆಡಿಸದೆ ಸರ್ವಭೂತಾ
ತ್ಮರಿಗೆ ಪಕ್ವಾನ್ನವನು ನೀಡೆಂ
ದುರುತರದ ಪ್ರೇಮದಲಿ ಕಳುಹಿದಳಗಜೆ ಕರುಣದಲಿ || ೧೪೦ ||

ಈತರದಿ ದೇವಾಸುರರು ನವ
ನೀತಿಮಾರ್ಗದಿ ಕರದು ವರಗಳ
ಪ್ರೀತಿಯಿಂದಾದರಿಸಿ ಕೊಟ್ಟರನೇಕ ವಿಭವದಲಿ
ಭೂತಳದ ಜನರೊಡನೆ ನೀ ಪ್ರ
ಖ್ಯಾತನಾಗೆನೆ ನರೆದಲಗನೆರೆ
ವಾತನಾದನು ಮರ್ತ್ಯದಲಿ ನರನಾಥ ಕೇಳೆಂದ || ೧೪೧ ||

ಇನಕುಲೇಂದ್ರನ ಪದಕೆ ವಂದಿಸಿ
ಹನುಮ ಬಿನ್ನೈಸಿದನು ನೀವಾ
ತನಿಗೆ ನಾಮಾಂಕಿತವನಿತ್ತಿರಿ ನಿಮ್ಮನಗಲುವೆನೆ
ಎನಗೆ ಹದನೆಂತೆನಲು ನಸುನಗೆ
ಮಿನುಗೆ ನುಡಿದನು ರಾಮನಿಷ್ಟವ
ನಿನಗೆ ನಿನ್ನಭಿಧಾನವಾಗಲು ಹನುಮ ಕೇಳೆಂದ || ೧೪೨ ||

ಸೇವಕನ ಹಿಂದುಳಿದು ದೇವರು
ನೀವು ಮುಂದಡಿಯಿಡಲು ನಿಮ್ಮದ
ದಾವ ಗುಣವೆನೆ ಹನುಮನಾಡಿದ ನುಡಿಗೆ ನಸುನಗುತ
ನಾವು ಜನನದಿ ಮುಂದು ಕಲಹದ
ಡಾವಿನಲಿ ನಾ ಮುಂದೆ ನಡೆಯೆಂ
ದೀ ವಿಚಾರವ ತಿಳುಹಿದನು ನರನಾಥನನಿಲಜಗೆ* || ೧೪೩ ||

ಭಾನುವಂಶಜನಾ ವಿಭೀಷಣ
ನಾನನವನೀಕ್ಷಿಸಲು ನಸುನಗು
ತಾ ನರೇಂದ್ರನ ಸನ್ನೆಯಲಿ ನಿಷ್ಠವಕನ ಕರೆದು

ಹುರುಳು=ಸಾರ. ಅಗಜೆ=ಪಾರ್ವತಿ. ವಿಭವ=ಉತ್ಸಾಹ. ಎರೆವಾತ=ಕೊಡುವವನು. ಮರ್ತ್ಯ=ಭೂಮಿ. ಮಿನುಗು=ಹೊಳೆ. ಅಭಿಧಾನ=ಹೆಸರು. ಡಾವು=ಸೇಡು (?)
* ಈ ಭಾಗ ಸರಿಯಾಗಿ ಅರ್ಥವಾಗುವುದಿಲ್ಲ. ಅನನ=ಮುಖ. ಭಾನುವಂಶಜ=ಸೂರ್ಯವಂಶದವನು, ರಾಮ.

ದಾನವೇಶ್ವರನಾ ಸತಿಗೆ ಸು
ಮ್ಮಾನದಿಂ ಕೊಡಲೀರ್ವರು ನವ
ಧಾನ್ಯದಲಿ ವಿಖ್ಯಾತರಾದರು ನೃಪತಿ ಕೇಳೆಂದ ॥ ೧೪೪ ॥

ಹರಿಹರ ಬ್ರಹ್ಮಾದಿ ದೇವಾ
ಸುರರು ಮಹಾಮುನೀಶ್ವರರು ಮಾ
ನರರು ಕೊಂಡಾಡಿದರು ರಘುಕುಲ ಸಾರ್ವಭೌಮಕನ
ಸುರರು ದುಂದುಭಿ ಮೊಳಗೆ ಮಲ್ಲಿಗೆ
ಯರಳ ಮಳೆಗರೆದವು ವಿಮಾನದಿ
ಪುರಕೆ ತೆರಳಿದರಲ್ಲಿ ಹರದುದು ನೃಪತಿಯಾಸ್ಥಾನ ॥ ೧೪೫ ॥

ಇಂತು ಸಭೆಯಲಿ ಮಾನಭಂಗವ
ದೆಂತು ಬಂದುದು ತನಗೆನುತಲತಿ
ಚಿಂತೆಯಲಿ ಕಂಡುನೊಂದು ತಲೆಗುತ್ತಿದನು ನೀರೊಳಗೆ
ಇಂತು ಪರಿತಾಪದಲಿ ಲಕ್ಷ್ಮೀ
ಕಾಂತ ಶಿವಶಿವಯೆನುತಲಿರೆ ಭೂ
ಕಾಂತ ದಶರಥರಾಮನಾಥನು ಕರೆದು ಲಾಲಿಸಿದ ॥ ೧೪೬ ॥

ಮರುಳೆ ಬಾರೈ ಪ್ರಿಹಿಯೆ ಮನದಲಿ
ಕೊರಗಿ ಚಿಂತಿಸಲೇಕೆ ನಾವೀ
ನರೆದಲಗನತಿಶಯುವ ಮಾಡಿದೆವೆಂದು ಕನಲಿದೆಯ
ಧರೆಗೆ ಹೊದ್ದಿದ ಕ್ಷಾಮಗಾಲದಿ
ಕರುಣದಿಂ ನಡೆತಂದು ಲೋಕವ
ಹೊರೆವನದು ಕಾರಣವೆ ಪತಿಕರಿಸಿದೆವು ಕೇಳೆಂದ ॥ ೧೪೭ ॥

ದೀನರಲಿ ದಾರಿದ್ರ್ಯ ಜನದಲಿ
ನೀನು ನಿರ್ದಯನೆಂದೆವಲ್ಲದೆ
ಹೀನಗಳೆದವರಲ್ಲ ನಿನ್ನನು ನಾವು ಸಭೆಯೊಳಗೆ

ಸುಮ್ಮಾನ=ಸಂತೋಷ. ಹರದುದು=ಮುಕ್ತಾಯಗೊಂಡಿತು. ತಲೆಗುತ್ತು=ತಲೆತಗ್ಗಿಸು.
ಕನಲ್=ಕೋಪಿಸು. ಹೊದ್ದಿದ=ಪ್ರಾಪ್ತವಾದ. ಹೊರೆ=ರಕ್ಷಿಸು.

ಮಾನುಷನು ನಮ್ಮೆಡೆಗೆ ನೀ ಸುರ
ಧೇನುವಿನ ಸಮ ನಿನ್ನ ಚಿತ್ರದಿ
ಹಾನಿದೋರಲದೇಕೆ ಬಿಡು ಬಿಡು ಚಿಂತೆ ಯಾಕೆಂದ || ೧೪೮ ||

ದೇವರಿಗೆ ಪರಮಾನ್ನ ನೀ ಮನು
ಜಾವಳಿಗೆ ಪಕ್ವಾನ್ನಮೀತನು
ನೀವು ಧರೆಯೊಳಗಿಬ್ಬರತಿ ಹಿತದಲಿ ನೀವಿಹುದು
ನಾವು ಕೊಟ್ಟೆವು ವರವ ಸಲ್ಲುವು
ದಾವ ಕಾಲದಲಿನ್ನು ನೀವೇ
ಪಾವನರು ಪರಮ ಸುಖಿಯೆಂದುಪಚರಿಸಿದನು ನೃಪತಿ || ೧೪೯ ||

ನಲವು ಹಿಂಗಿದ ವ್ರಿಹಿಯ ರಾಗಿಯು
ಜಲವ ಹಸ್ತದೊಳೊರಸಿ ಇಂದ್ರನ
ಬಳಿಗೆ ಕಳುಹುವೆ ನಿನ್ನ ಸಂಶಯವೇಕೆ ಚಿತ್ತದಲಿ
ಕಲಿತನವ ಕೈಕೊಂಡು ಸತ್ಯದ
ಹೊಲಬುದಪ್ಪದೆ ಚೋಳದೇಶವ
ನೊಲಿದು ನೀ ಸಲಹೆಂದು ನೇಮವನಿತ್ತು ಕಳುಹಿಸಿದ || ೧೫೦ ||

ಪಾಂಡವಾಗ್ರಜ ಕೇಳಿದೈ ಮಾ
ರ್ತಾಂಡ ವಂಶಜ ದಾಶರಥಿಯಾ
ಖಂಡಲನ ಮತವಿಡಿದು ಕರಸಿದನತುಳ ಧಾನ್ಯವನು
ಗಂಡುಗಲಿಗಳು ನೀವು ಧರಣೀ
ಮಂಡಲದೊಳಾದರಿಸಿ ದೇವರ
ನಂಡಲೆದು ಸಲಹೆಂದು ನೇಮವನಿತ್ತು ಕಳುಹಿಸಿದ || ೧೫೧ ||

ತಪಸಿಗಳನಾದರಿಸಿ ದೇಶಾ
ಧಿಪರ ಮನ್ನಿಸಿ ಧರಣಿಯಮರರ
ನುಪಚರಿಸಿ ವಿದ್ವಾಂಸ ಕವಿಜನ ಮಲ್ಲಗಾಯಕರ

ಸುರಧೇನು=ಕಾಮಧೇನು. ಪಾವನದು=ಪವಿತ್ರರು. ಕಲಿತನ=ಶೌರ್ಯ. ಹೊಲಬು=ದಾರಿ. ನೇಮ=ಆಜ್ಞೆ. ಮಾರ್ತಾಂಡ=ಸೂರ್ಯ. ಅಖಂಡಲ=ಇಂದ್ರ. ಅಂಡಲೆ=ಪೀಡಿಸು, ಹಿಂಬಾಲಿಸು.

ಅಪರಿಮಿತ ಯಾಚಕರ ಕಳುಹಿಸಿ
ತಪನತನಯನ ಸತಿಯರಿಗೆ ರಘು
ನೃಪತಿಕೊಡಿಸಿದನಖಿಳ ದಿವ್ಯಾಂಬರ ಸುಭೂಷಣವ || ೧೫೨ ||

ಪಾಂಡವಾಗ್ರಜ ಕೇಳು ಘನ ಕೋ
ದಂಡ ದೀಕ್ಷಾಚಾರ್ಯ ನೀ ಭೂ
ಮಂಡಲದೊಳತಿ ಕೀರ್ತಿವಡೆದನು ಸತ್ಯಧರ್ಮದಲಿ
ಚಂಡ ವಿಕ್ರಮ ರಾಮ ನೃಪ ಮಾ
ರ್ತಾಂಡಸುತ ಮೊದಲಾದ ವಾನರ
ತಂಡವನು ಕಳುಹಿಸಿ ಸುವಸ್ತುವನಿತ್ತು ಸತ್ಕರಿಸಿ || ೧೫೩ ||

ಕರುಣದಿಂದ ವಿಭೀಷಣನ ಪತಿ
ಕರಿಸಿ ಕರಿರಥ ತುರಗ ವಸ್ತ್ರಾ
ಭರಣವಿತ್ತುಪಚರಿಸಿ ಕಳುಹಿದನಾಗಳಸುರರನು
ಗುರು ವಸಿಷ್ಠನ ಮತದಿ ತಮ್ಮಂ
ದಿರು ಸಹಿತ ಸಾಮ್ರಾಜ್ಯವಾಳಿದ
ವರದನಗಪತಿಯಾದಿಕೇಶವರಾಮ ವಿಭವದಲಿ || ೧೫೪ ||

ವ್ಯೋಮಕೇಶವಿರಿಂಚಿವಾಸವ
ತಾಮರಸದಳನಯನರಿವರು ಮ
ಹಾ ಮಹಿಮರೀ ವ್ರಿಹಿಯನರೆದಲಗರ ವಿವಾದವನು
ರಾಮ ಸಭೆಯಲಿ ತೀರಿದುದು ಸು
ತ್ರಾಮನೋಲಗದಲ್ಲಿ ಕೇಳ್ದೆವು
ರಾಮಧಾನ್ಯದ ಕಥೆಯನಭವರ್ಣಿಸಿದೆ ನಿನಗೆಂದ || ೧೫೫ ||

ಆಲಿಸಿದೆನೆಲೆ ಮುನಿಪ ನೀವಿದ
ಪೇಳೆ ಕೇಳ್ದೆನು ಮೇಲೆ ಸಜ್ಜನ
ಜಾಲ ತಣಿಯಿತು ಸಕಲ ಕರ್ಣಾಮೃತದಿ ರಂಜಿಸಿತು

ತಪನತನಯ=ಸುಗ್ರೀವ. ಕೋದಂಡದೀಕ್ಷಾಚಾರ್ಯ=ರಾಮ. ವರದ=ಕೇಳಿದ್ದನ್ನು ಕೊಡುವವನು. ನಗಪತಿ=ಶಿವ, ವೆಂಕಟೇಶ್ವರ. ವ್ಯೋಮಕೇಶ=ಶಿವ. ವಿರಿಂಚಿ=ಬ್ರಹ್ಮ. ತಾಮರಸದಳನಯನ=ಕಮಲಾಕ್ಷ, ರಾಮ, ಸುತ್ರಾಮ=ಇಂದ್ರ.

ಹೇಳಲೇನದ ಮನದ ಬೇಸರ
ಬೀಳುಕೊಂಡುದು ಹರುಷ ಚಿತ್ತದೆ
ಧಾಳಿ ಹರಿಯಿತ್ತೆನುತ ಮುನಿಪದಕೆರಗಿ ಕೈಮುಗಿದ || ೧೫೭ ||

ಅರಸ ನೀ ಮನವೊಲಿದು ಕೇಳದ
ಚರಿತೆ ತಾನೊಂದಿಲ್ಲ ಲೋಕದಿ
ಪರಮ ಪುಣ್ಯದ ರಾಮಕಥೆಯಿದ ಕೇಳ್ದೆ ನೀನಿಂದು
ಕೊರತೆಯುಂಟೇ ಇಷ್ಟಭೋಗವ
ಹರಿಕೊಡುವ ನಿಮಗಿನ್ನು ಯೆನುತುಪ
ಚರಿಸಿ ಕಳುಹಿಸಿಕೊಂಡು ಮುನಿ ಹೊರವಂಟನಾಶ್ರಮಕೆ || ೧೫೮ ||

ಶರಧಿಶಯನ ಮುಕುಂದ ಸಚರಾ
ಚರಭರಿತ ನಿರ್ಗುಣ ನಿರಾಮಯ
ಸುರ ನರೋರಗವಂದ್ಯ ವರಪುರದಾದಿಕೇಶವನ
ಚರಣದಂಕಿತವಾಗಿ ಪೇಳಿದ
ಪರಮಧಾನ್ಯದ ಚರಿತೆ ಸಂತತ
ಧರೆಯೊಳಿಂತೊಪ್ಪಿಹುದು ಆಚಂದ್ರಾರ್ಕ ಪರಿಯಂತ || ೧೫೯ ||

ಶರಧಿಶಯನ=ಕ್ಷೀರಸಾಗರವೇ ಹಾಸುಗೆಯಾದವನು, ಸಚರಾಚರಭರಿತ=ಸರ್ವವ್ಯಾಪಿ. ನಿರಾಮಯ=ಕಲ್ಮಷದೂರ. ಅಂಕಿತವಾಗಿ=ಹೆಸರಿನಲ್ಲಿ ಆಚಂದ್ರಾರ್ಕಪರಿಯಂತ= ಚಂದ್ರ ಸೂರ್ಯರಿರುವ ತನಕ.

## ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ

## ಇಲಾಖಾ ಪ್ರಕಟಣೆಗಳು ಮತ್ತು ಮಾರಾಟ ಪುಸ್ತಕಗಳು

| | | |
|---|---|---|
| ೧ | ಭಾರತದ ಸಂವಿಧಾನ | ೨೦-೦೦ |
| ೨ | ಕಾನೂನು ಪದಕೋಶ | ೩೦-೦೦ |
| ೩ | ಡಿ. ವಿ. ಜಿ. ಯವರ ಕೃತಿಶ್ರೇಣಿ ಸಂಪುಟ-೧ ವಿಚಾರ ವಿಮರ್ಶೆ | ೩೦-೦೦ |
| ೪ | ಭಾರತದ ಗೆಜೆಟಿಯರ್ ಸಂಪುಟ ೧, ೨, ೩, ೪ | ೨೫೦-೦೦ |
| ೫ | ಆಂಗ್ಲರ ಆಡಳಿತದಲ್ಲಿ ಕನ್ನಡ | ೫೦-೦೦ |
| ೬ | ಆಯುರ್ವೇದಸಾರ—ಪ್ರಥಮ ಭಾಗ | ೫೦-೦೦ |
| ೭ | ಆಯುರ್ವೇದಸಾರ—ದ್ವಿತೀಯ ಭಾಗ | ೬೦-೦೦ |
| ೮ | ವಿಶ್ವಕನ್ನಡ ಸಮ್ಮೇಳನದ ಸೆಟ್ಟು—೪ ಸಂಪುಟಗಳು | ೬೫-೦೦ |
| ೯ | ಪುರಂದರ ಸಾಹಿತ್ಯದರ್ಶನದ ಸಾದಾ ಸೆಟ್ಟು | ೬೫-೦೦ |
| ೧೦ | ,, ಕ್ಯಾಲಿಕೊ ಪ್ರತಿ | ೨೫೦-೦೦ |
| ೧೧ | ಗ್ರಾಮಸೂಚಿ | ೧೬-೭೫ |
| ೧೨ | ಆಡಳಿತ ಶಬ್ದಕೋಶ | ೧೧-೫೦ |
| ೧೩ | ವಿಶ್ವಕನ್ನಡ ಸಮ್ಮೇಳನದ ೫೦ ಪುಸ್ತಕಗಳ ೧ ಸೆಟ್ಟು | ೨೫೦-೦೦ |

೧. ಹರಿಶ್ಚಂದ್ರ ಕಾವ್ಯ ೨. ಪ್ರಭುಲಿಂಗಲೀಲೆ (ಕನ್ನಡ ಗದ್ಯಾನುವಾದ)
೩. ಕರ್ನಾಟ ಭಾರತ ಕಥಾಮಂಜರಿ ೪. ಭರತೇಶ ವೈಭವ ಸಂಗ್ರಹ
೫. ಜೈಮಿನಿ ಭಾರತ ೬. ನಳಚರಿತ್ರೆ ೭. ಸರ್ವಜ್ಞ ವಚನಗಳು
೮. ಶಿಶುನಾಳ ಷರೀಫರ ಗೀತೆಗಳು ೯. ಕೈವಲ್ಯ ಪದ್ಧತಿ ೧೦. ವರುಣ
೧೧. ಯಶೋಧರ ಚರಿತೆ (ಕನ್ನಡ ಗದ್ಯಾನುವಾದ ಸಹಿತ) ೧೨. ಗೋವಿನ
ಹಾಡು ೧೩. ಸೋಮೇಶ್ವರ ಶತಕ ೧೪. ತಮಸಾ ನದಿ ಎಡ ಬಲದಿ
೧೫. ಆಯ್ದ ಕವನಗಳು ೧೬. ಮರಳಿ ಬಂದ ಕವಿತೆ ೧೭ ಸಾವಿರಾರು
ನದಿಗಳು ೧೮. ಕಥನ ಕವನಗಳು ೧೯. ವಾಗ್ದೇವಿ ೨೦. ಎಡಕಲ್ಲು
ಗುಡ್ಡದ ಮೇಲೆ ೨೧. ಮುದ್ರಾಮಂಜೂಷ ೨೨. ಮಾಡಿ ಮಡಿದವರು
೨೩. ಇಂದಿರಾಬಾಯಿ ೨೪. ಕರಾವಳಿ ೨೫. ಮಾನವ ೨೬. ಒಡಲಾಳ
೨೭. ಪರಂಪರೆ ೨೮. ಹಿಂದಿರುಗಿ ಬರಲಿಲ್ಲ ೨೯. ಪಯಣದ ಹಾದಿಯಲ್ಲಿ
೩೦. ಭುಜಂಗಯ್ಯನ ದಶಾವತಾರಗಳು ೩೧. ನಗೆಗಡಲು ೩ . ಸಂಗಮ
೩೩. ಕಂಬನಿ ಮತ್ತು ಚಿಗರು ೩೪. ರುದ್ರವೀಣೆ ೩೫. ಆಯ್ದ ಕಥೆಗಳು
೩೬. ಆನಂದರ ಆಯ್ದ ಕಥೆಗಳು ೩೭. ಜೀವನ ಮತ್ತು ಕಥೆಗಳು
೩೮. ರಾಷ್ಟ್ರಕವಿ ಕುವೆಂಪು ೩೯. ಸಂಕ್ರಾಂತಿ ೪೦. ಹೃದಯ ಸಂವಾದ
೪೧. ಯಕ್ಷಗಾನ ಪ್ರಸಂಗಗಳು ೨. ಗಾಳೀಪಟ ೪೩. ವೃಕ್ಷಮೋಹನ
೪೪. ನಾ ಕಂಡ ಜರ್ಮನಿ ೪೫. ಶ್ರೀ ಗಿರಿಯಿಂದ ಹಿಮಗಿರಿಯವರೆಗೆ
೪೬. ಸ್ವಸ್ಥ ಜೀವನ ೪೭. ಪ್ರಾಣಿಪರಿಸರ ೪೮. ಹೃದಯ ರೋಗಗಳು
೪೯. ನಮಗೆಂಥ ಮಕ್ಕಳು ಬೇಕು? ೫೦. ಸತ್ಯಾಗ್ರಹ.

